ಹುಡುಗಿ ನೆರೆದ ವಿಚಾರ ತಿಳಿದ ತಕ್ಷಣ ಹಾಲಿಗೆ ತುಪ್ಪ, ಸಕ್ಕರೆ ಹಾಕಿ ಕುಡಿಯಲು ಕೊಟ್ಟು, ನೀರು ಹಾಕಿಕೊಂಡು ಬರುವವರೆಗೆ ಪ್ರತ್ಯೇಕ ಕೋಣೆಯಲ್ಲಿ ವ್ಯವಸ್ಥೆ ಮಾಡುತ್ತಾರೆ. ಮದುವೆಯಾದವಳು ಮೈನೆರೆದರೆ ಗಂಡನಿಗೆ ಉಡುಗೊರೆ ಕಳಿಸುವ ಪದ್ಧತಿ ಬಾಲ್ಯ ವಿವಾಹವಿದ್ದ ಕಾಲದಲ್ಲಿ ಆಚರಣೆಯಲ್ಲಿತ್ತು. ಆ ದಿನ ಹುಡುಗಿ ಮತ್ತು ಗಂಡನ ಮನೆಯಲ್ಲಿ ಹಬ್ಬದ ಸಂಭ್ರಮವಿರುತ್ತಿತ್ತು. ಈ ರೀತಿ ಶುಭಸಮಾಚಾರ ತಂದವನಿಗೆ ತಕ್ಕ ಮರ್ಯಾದೆ ನೀಡುತ್ತಿದ್ದರು.

ಚಿಗುಳಿ ಉಂಡೆ :- ನೆರೆದ ಹುಡುಗಿಯ ದೈಹಿಕ ಬದಲಾವಣೆಯನ್ನು ಅನುಸರಿಸಿ ಅವಳು ಕಾಲಕಾಲಕ್ಕೆ ಮುಟ್ಟಾಗಲು 'ಚಿಗುಳಿ' ಸಹಕಾರಿಯಾಗುತ್ತದೆ. ಈ ರೀತಿ ಚಿಗುಳಿ ತಿನ್ನಿಸುವುದು ಹಿಂದಿನ ವೈದ್ಯಪದ್ಧತಿಯಾಗಿತ್ತು. ಒರಳನ್ನು ತೊಳೆದು ಪೂಜೆ ಮಾಡಿ

ಮುತ್ತೈದೆಯರು, ಹಸಿ ಒಳ್ಳೆಳ್ಳು ಮತ್ತು ಬೆಲ್ಲವನ್ನು ಸೇರಿಸಿ ಒನಕೆಯಿಂದ ಕುಟ್ಟಿ ಸಣ್ಣ-ಸಣ್ಣ ಉಂಡೆಗಳನ್ನು ಮಾಡಿಕೊಡುತ್ತಿದ್ದರು. ಈ ಚಿಗುಳಿಯನ್ನು ಹೆಚ್ಚಾಗಿ ಮೈನೆರೆದ ಹುಡುಗಿಯರಿಗೆ ಮಾತ್ರ ಹಂಚುತ್ತಿದ್ದರು. ಗಂಡಸರಿಗೆ ಕೊಡುತ್ತಿರಲಿಲ್ಲ. ಚಿಗುಳಿ ಉಷ್ಣಕಾರಕ. ಮತ್ತು ಕೊಬ್ಬಿನಿಂದ ಕೂಡಿದ್ದು ದೇಹದ ಜಡತ್ವ ತರುವಂಥದು. ನಂತರ ಸಂಜೆ ಅರಿಶಿನದ ಓಕುಳಿ ಮಾಡಿ ಅದನ್ನು ಬಲಗೈಯಲ್ಲಿ ಅದಿ ಬಟ್ಟೆಗಳಿಗೆ ಒತ್ತಿ ಕೈ ಗುರುತು ಮಾಡುತ್ತಿದ್ದರು. ಈ ರೀತಿಯ ಆಚರಣೆಗೆ 'ದಡಮ' ಎಂದು ಕರೆಯುತ್ತಾರೆ. ಇದನ್ನೇ ಹಣೆಮನೆಯ ಮೇಲಕ್ಕೆ ಹಾಸುತ್ತಿದ್ದರು. ಈ ರೀತಿಯ ಆಚರಣೆ ಹುಡುಗಿಗೆ ನಂಜು ತಾಗದಿರಲಿ ಎಂಬ ಕಾರಣಕ್ಕಾಗಿ.

**ಗೋಡೆಗೆ ಚಟ್ಟು ಬಡಿಯುವುದು:-** ಋತುಮತಿಯಾದ ಹುಡುಗಿಯು ಹಸೆಮಣೆಗೆ ಬಂದ ನಂತರ ಮುತ್ತೈದೆಯರು ಅವಳಿಗೆ ಅರಿಶಿನ ಮತ್ತು ಸುಣ್ಣವನ್ನು ಕೊಡುತ್ತಾರೆ. ಅವಳು ಅದನ್ನು ಕೈಯಲ್ಲಿ ಕಲಸಿ ಗೋಡೆ ಕಡೆಗೆ ಬೆನ್ನು ತಿರುಗಿಸಿ ತೊಡೆಯ ಪಕ್ಕಕ್ಕೆ ಬರುವಂತೆ ಗೋಡೆಗೆ ಬಡಿಯುತ್ತಾಳೆ. ನಂತರ ಭುಜಗಳ ಹತ್ತಿರ ಬರುವಂತೆ ಬಡಿಯುತ್ತಾಳೆ. ನಂತರ ಬೆನ್ನಿನ ಹಿಂದಕ್ಕೆ ಬರುವಂತೆ ಬಡಿಯುತ್ತಾಳೆ. ಈ ರೀತಿ ಬಡಿದಾಗ ತನ್ನ ಅಂಗೈ ಗುರುತು ಪೂರ್ಣ ಗೋಡೆಗೆ ತಟ್ಟಿರಬೇಕು. ಈ ರೀತಿಯ ಗುರುತುಗಳು ಅವಳ ಹೆಣ್ತನದ ಮತ್ತು ಶುಭಸಂಕೇತದ ಪ್ರತೀಕಗಳಾಗಿರುತ್ತದೆ.

**ಮಡಿಲು ತುಂಬುವುದು:-** ಹಸೆಮಣೆಯ ಮುಂದೆ ಮನೆಯವರು ಇಟ್ಟಿರುವ ಮಂಗಳದ್ರವ್ಯ ಹಾಗೂ ಒಂದು ಮರದ ಬೊಂಬೆಯನ್ನು ತೆಗೆದುಕೊಂಡು ತಾನೇ ತಟ್ಟೆಯಲ್ಲಿಂದ ಅಕ್ಕಿ, ಕಾಕಿ, ಹೂವು, ಹಣ್ಣುಗಳನ್ನು ಮಡಿಲಿಗೆ ತುಂಬಿಕೊಳ್ಳುತ್ತಾಳೆ. ಸ್ತ್ರೀಯರು ಆರತಿ ಮಾಡುತ್ತಾ ಹಾಡು ಹೇಳಿ ಆಶೀರ್ವದಿಸುತ್ತಾರೆ. ಸುಮಾರು ಮೂರು ದಿನಗಳ ಕಾಲ ಈ ಆಚರಣೆ ನಡೆಯುತ್ತದೆ. ಈ ಕಾಲದಲ್ಲಿ ಅಗಸಗಿತ್ತಿಗೆ ಹೆಚ್ಚಿನ ಪ್ರಾಧಾನ್ಯವಿದೆ. ಎರಡು ದಿನಗಳ ಕಾಲ ನೆರೆದ ಹುಡುಗಿಗೆ ಅವಳೇ ಚಟ್ಟು ಬಡಿಸಿ 'ದಡಮ' ಹಾಕಿಸುತ್ತಾಳೆ.

ನಾಲ್ಕನೆಯ ದಿನ ನೆರೆದ ಹುಡುಗಿಗೆ ಹೊಳೆ ಅಥವಾ ಮರದ ಬುಡದಲ್ಲಿ ಮುಂಜಾನೆ ಐದು ಗೆಂಟೆಗೆಲ್ಲಾ ಸ್ನಾನ ಮಾಡಿಸುತ್ತಾರೆ. ಉಟ್ಟ ಬಟ್ಟೆಗಳನ್ನು ಅಗಸಗಿತ್ತಿಗೆ ಕೊಡುತ್ತಾರೆ. ಮನೆಯ ಒಳಗೆ ಬರುವಾಗ 'ನಿವಾಳಿಕೆ' ಆರತಿ ಎತ್ತುತ್ತಾರೆ. ಹಿಂದೆ ಹುಡುಗಿಯನ್ನು ಬ್ರಾಹ್ಮಣಕೇರಿಗಳಲ್ಲಿ ಮೆರವಣಿಗೆ ಕರೆದೊಯ್ಯುತ್ತಿದ್ದರು. ಇದು ನೆರೆದ ವಿಚಾರ ತಿಳಿಯಲಿ ಎಂದು ತಿಳಿಸಲಿಕ್ಕಾಗಿ ಮಾತ್ರ. ಈಗಿನ ದಿನಗಳಲ್ಲಿ ಈ ಆಚರಣೆ ರೂಢಿಯಲ್ಲಿಲ್ಲ. ರಾತ್ರಿಯಲ್ಲಿ ಹುಡುಗಿಗೆ ಅಲಂಕಾರ ಮಾಡಿ ಆರತಿ, ಅಕ್ಷತೆ ಶಾಸ್ತ್ರ ನಡೆಸುತ್ತಿದ್ದರು. ಆ ನಂತರ ಕೆಲವು ತಿಂಗಳು ಹುಡುಗಿಯನ್ನು ಆರೈಕೆ ಮಾಡಿ ಮೈ ತುಂಬಿಕೊಳ್ಳುವಂತೆ ಮಾಡುತ್ತಿದ್ದರು. ನೆರೆದ ಕಾಲದಲ್ಲಿ ಮನೆಯವರಿಗೆಲ್ಲಾ ಮೂರು ದಿನಗಳ ಕಾಲ 'ಪುರುಡು' ಇರುತ್ತಿತ್ತು. ಈ ದಿನಗಳಲ್ಲಿ ಶುಭಕ್ಕೆ ಸಂಬಂಧಿಸಿದ ಕಾರ್ಯಾದಿಗಳು ಅಥವಾ ದೇವತಾರಾಧನೆ, ವಿವಾಹ, ಮಂಗಳಾದಿ ಕಾರ್ಯಗಳನ್ನು ಮಾಡುತ್ತಿರಲಿಲ್ಲ.

**ಗರ್ಭಿಣಿಯರಿಗೆ ಸಂಬಂಧಿಸಿದ ಆಚರಣೆ:-** ಗರ್ಭಿಣಿಯರ ಆರೈಕೆ ಮತ್ತು ಅವರು ಗರ್ಭವನ್ನು ಜತನವಾಗಿ ರಕ್ಷಿಸಿಕೊಳ್ಳಲು ಹಾಗೂ ಸುಖವಾಗಿ ಪುತ್ರನನ್ನು ಹಡೆಯಲು ಅನುಕೂಲವಾಗುವಂತೆ ಕೆಲವು ಆಚರಣೆಗಳನ್ನು ಹಿರಿಯರು ನಡೆಸುತ್ತಿದ್ದರು. ಅವಳಿಗೆ ಬೇಕಾಗುವ ಸಾತ್ವಿಕ ಆಹಾರ, ಬಸುರಿ ಇಷ್ಟಪಡುವ ತಿಂಡಿ ತಿನಿಸುಗಳನ್ನು ಅವಳ ಆಕಾಂಕ್ಷೆಗೆ ತಕ್ಕಂತೆ ಒಂಬತ್ತು ತಿಂಗಳಲ್ಲಿಯೂ ಮನೆಯವರು ಮಾಡಿ ಕೊಡುತ್ತಿದ್ದರು. ಆರನೆಯ ತಿಂಗಳಲ್ಲಿ ಬಸುರಿಗೆ ಹೂವು ಮುಡಿಸುವುದು ಹಾಗೂ ಬಳೆ ತೊಡಿಸುವುದನ್ನು ಒಂದು ವಿಶೇಷ ಆಚರಣೆಯಾಗಿಯೇ ಮಾಡುತ್ತಾರೆ. ಈ ಕಾರ್ಯ ಶಾಸ್ತ್ರದಂತೆ ಷೋಡಶ ಸಂಸ್ಕಾರವಾದರೂ ಸ್ತ್ರೀಯರ ಆಚರಣೆಗಳು ಇಲ್ಲಿ ಪ್ರಮುಖವಾಗಿರುತ್ತದೆ. ಎಂಟನೆಯ ತಿಂಗಳಲ್ಲಿ ಹವನ ಹೋಮ ಪೂಜೆಗಳಲ್ಲದೆ ಮುಳ್ಳಿನಿಂದ ಗಂಡಸು ತಲೆ ಬಾಚಿ ಬೈತಲೆ ತೆಗೆಯುತ್ತಾನೆ. ಆ ದಿನ ಬ್ರಾಹ್ಮಣರಿಗೂ ಸುವಾಸಿನಿಯರಿಗೂ ಊಟವಿರುತ್ತದೆ. ರಾತ್ರಿ ಸ್ತ್ರೀಯರು ಬಸುರಿಯನ್ನು ಹಸೆಯ ಮೇಲೆ ಕುಳ್ಳಿರಿಸಿ ಆರತಿ ಮಾಡುತ್ತಾರೆ. ಬಂದ ಸ್ತ್ರೀಯರಿಗೆಲ್ಲಾ ಉಂಡೆ, ಚಕ್ಕುಲಿ ಬಾಗಿನ ನೀಡುತ್ತಾರೆ. (ಉಡುಪಿ ಎಂ.ಜಿ.ಎಂ. ಕಾಲೇಜಿನ ಉಪನ್ಯಾಸಕರಾದ ಡಾ॥ ಡಿ.ಆರ್. ಪಾಂಡುರಂಗ ಅವರು ಶ್ರೀ ಶಾರದಾಂಬ ದೇವಸ್ಥಾನದ ಸ್ಮರಣ ಸಂಚಿಕೆಗೆ (2005) ಬರೆದ ಲೇಖನವನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿದ್ದೇವೆ).

## ಅಂತ್ಯೇಷ್ಟಿ (ಹದಿನಾರನೆಯ ಮತ್ತು ಕಡೆಯ ಸಂಸ್ಕಾರ)

ಜೀವವು ಶರೀರವನ್ನು ಪಡೆದು ಕ್ರಿಯಾಶೀಲವಾಗಿರುತ್ತದೆ. ಶರೀರ ಮತ್ತು ಜೀವವು ಬೇರೆಯಾದಾಗ ಅದು ಮರಣ ಎನ್ನಿಸಿಕೊಳ್ಳುತ್ತದೆ. ಮೃತ್ಯು ಎಂದರೆ ಮೃತ್ ಮತ್ತು ಯು ಗಳ ಸಂಹೋಗದಿಂದ ಆದದ್ದು. ಮೃತ್ ಎಂದರೆ ಮಣ್ಣು, ಯು ಎಂದರೆ ಮಿಶ್ರಣಗಳು. ಪ್ರಕೃತಿ ವಸ್ತುಗಳಿಂದಾದ ಶರೀರವು ಪುನಃ ಮಣ್ಣಿಗೇ ಸೇರಿಕೊಳ್ಳುವುದು ಮೃತ್ಯು ಎಂದು ಕರೆಯಲ್ಪಡುತ್ತದೆ. ಮೃತ್ಯುರೀಶೇ ದ್ವಿಪದಾಮ್। ಮೃತ್ಯುರೀಶೇ ಚತುಷ್ಪದಾಮ್। ಕಸಾತ್ವಂ ಮೃತ್ಯೋ ರ್ಗೋಪತೇ ರುದ್ಧರಾಮಿ ಸಮಾವಿಭೇ ಎಂದರೆ ಮೃತ್ಯುವು ಎರಡು ಕಾಲಿನ, ನಾಲ್ಕು ಕಾಲಿನ ಸಕಲ ಜೀವ ಜಂತುಗಳನ್ನು ಆಳುತ್ತದೆ. ಆದುದರಿಂದ ಹೇ! ಇಂದ್ರಿಯಗಳ ಒಡೆಯನಾದ ಜೀವಾತ್! ನೀನು ಸಾವಿಗೆ ಹೆದರಬೇಡ. ಸಾವಿನಿಂದ ಬಿಡುಗಡೆಯಾಗುವುದೇ ನಿನ್ನ ಉದ್ಧಾರ ಎಂಬ ವಚನವಿದೆ. ಇದನ್ನೇ ಕಾಲದ ಮಹಿಮೆಯೆಂದು ಕರೆಯುವುದು. ಕಾಲಂ ಪಚತಿ ಭೂತಾನಿ ಕಾಲಃ ಸಂಹರತೇ ಪ್ರಜಾಃ ಕಾಲಃ ಸುಪ್ತೇಷು ಜಾಗರ್ತಿ ಕಾಲೋತಿ ದುರತಿ ಕ್ರಮಃ। ಎಲ್ಲ ಪ್ರಾಣಿಗಳನ್ನು ಸೆಳೆಯುವಂತೆ ಮಾಡುವುದೇ ಕಾಲ. ಸಮಸ್ತ ಪ್ರಜೆಗಳನ್ನು ಸಂಹಾರ ಮಾಡುವುದೂ ಕಾಲವೇ. ಮಲಗಿರುವವರಲ್ಲೂ ಕಾಲವು ಜಾಗ್ರತವಾಗಿರುತ್ತದೆ. ಕಾಲವನ್ನು ಅತಿಕ್ರಮಿಸುವುದು ಕಷ್ಟ ವಚನವು ಹೀಗೆ ಮುಂದುವರಿದು ಕಾಲದ ಅನಂತವಾದ ಮಹಿಮೆಯನ್ನು ಹೇಳುತ್ತದೆ. ನೂರಾರು ಬಾಣಗಳು ನಾಟಿದರೂ ಯಾವ ಪ್ರಾಣಿಯೂ ಅಕಾಲದಲ್ಲಿ ಸಾಯುವುದಿಲ್ಲ ಮತ್ತು ಕಾಲ ಬಂದಾಗ ಹುಲ್ಲುಕಡ್ಡಿ ತಾಕಿದರೂ ಸಾಯುತ್ತಾನೆ. ಕಾಲನಿಗೆ ಪ್ರೀತಿಪಾತ್ರರಾಗಲಿ, ದ್ವೇಷಿಗಳಾಗಲಿ ಯಾರೂ ಇಲ್ಲ. ಅವನ ಆಯಸ್ಸು ಕರ್ಮವು ಕ್ಷೀಣವಾದಾಗ ಕೊಂದೇ ಕೊಲ್ಲುತ್ತಾನೆ.

ಯಾವುದು ಮಹದಾಶ್ಚರ್ಯ: ಮಹಾಭಾರತದ ಯಕ್ಷ, ಯುಧಿಷ್ಠಿರ ಸಂವಾದದಲ್ಲಿ ಯಕ್ಷನು ಕಿಮಾಶ್ಚರ್ಯಮ್? - ಯಾವುದು ಹೆಚ್ಚಿನ ಆಶ್ಚರ್ಯಕರವಾದುದು ಎಂಬ ಪ್ರಶ್ನೆಗೆ ಯಮಪುತ್ರನು ಹೇಳುತ್ತಾನೆ: ಮಹಾರಾಜ ಯಕ್ಷ! ಈ ಪ್ರಪಂಚದಲ್ಲಿ ಪ್ರತಿದಿನವೂ ಪ್ರಾಣಿಗಳು ಯಮಸದನಕ್ಕೆ ಹೋಗುತ್ತಿರುತ್ತವೆ. ಆದರೆ ಇದನ್ನೇ ನೋಡುತ್ತಿರುವ ಇತರರು ತಾವು ಸ್ಥಿರ ಎಂದು ನಂಬಿಕೊಂಡಿರುತ್ತಾರೆ. ಇದಕ್ಕಿಂತ ಮಹದಾಶ್ಚರ್ಯ ಬೇರೇನಿದೆ?

ಸಾವು ಜೀವಿಗೆ ಅನಿವಾರ್ಯ. ಜನನ ಆದಾಗ ಜೀವಿಯು ಪ್ರಪಂಚವನ್ನು ಸುಖಿಸಿದರೆ; ಅಂತ್ಯಸಂಸ್ಕಾರದಿಂದಾಗಿ ಜೀವಿಯು ಸುಖಿಸುತ್ತದೆ ಎಂಬುದಾಗಿ ಬೋಧಾಯನರು ಹೇಳುತ್ತಾರೆ.

ಆದುದರಿಂದಲೇ ಜನನ - ಮರಣವೆನ್ನುವುದು ಜೀವಿಗೆ ಚಕ್ರವಿದ್ದಂತೆ. ಈ ಎರಡು ಕೊನೆಗಳ ನಡುವೆ ಇರುವುದು ಬದುಕು. ಈ ಬದುಕಿನ ಅವಧಿಯಲ್ಲಿ ಆರು ವಿಕಾರಗಳಿವೆಯೆಂದು ಯಾಸ್ಕರು ಹೇಳಿರುತ್ತಾರೆ. ಜಾಯತೇ, ಅಸ್ತಿ, ವರ್ಧತೇ, ವಿಪರಿಣಮತೇ, ಅಪಕ್ಷೀಯತೇ, ನಶ್ಯತಿ ಎಂದು ವಿಕಾರಗಳಿರುತ್ತದೆ. ಆದುದರಿಂದಲೇ ಬದುಕು ನಿತ್ಯವಲ್ಲ.

ಆರು ವಿಕಾರಗಳು : ಜಾಯತೇ - ಹುಟ್ಟುತ್ತದೆ, ಅಸ್ತಿ - ಇರುತ್ತದೆ, ವಿಪರಿಣಮತೇ - ಮಾರ್ಪಡುತ್ತದೆ, ಅಪಕ್ಷೀಯತೆ - ಸವೆಯುತ್ತದೆ, ವಿನಶ್ಯತಿ - ಹಾಳಾಗುತ್ತದೆ, ವರ್ಧತೇ - ಬೆಳೆಯುತ್ತದೆ.

ಮಹಾಭಾರತ ಶಾಂತಿಪರ್ವದಲ್ಲಿ ಮರಣವನ್ನು ಕುರಿತು ಈ ರೀತಿಯ ವಿಶ್ಲೇಷಣೆ ಇದೆ: ಪಂಚಭೂತಗಳ ಸಂಘಾತದ ಹೊರತೂ ಜೀವ ಎಂಬುದು ಪ್ರತ್ಯೇಕವಾಗಿ ಇರುವುದಿಲ್ಲ. ಒಟ್ಟಾಗಿ ಪಂಚಭೂತಗಳು ಸೇರಿಕೊಂಡೇ ಜೀವಸೃಷ್ಟಿಆಗಿರುವುದು. ಒಟ್ಟಾಗಿ ಸೇರಿರುವ ಪಂಚಭೂತಗಳಲ್ಲಿ ಯಾವುದಾದರೂ ಒಂದಕ್ಕೆ ಅಭಾವವುಂಟಾದರೆ ಉಳಿದ ನಾಲ್ಕು ಭೂತಗಳಿಗೆ ಅಲ್ಲಿ ಅಸ್ತಿತ್ವವೇ ಇರುವುದಿಲ್ಲ. ದೇಹವು ಮಣ್ಣಾಗುತ್ತದೆ. ಇದನ್ನೇ

poornapathi@gmail.com

ಮೃತ್ಯು-ಮರಣ ಎನ್ನುತ್ತಾರೆ. ಹೀಗೆ ಪಂಚಭೂತಗಳ ಐಕ್ಯದಿಂದ ದೇಹವು ಕಾಣಿಸುತ್ತದೆ. ಅವು ಇಲ್ಲದಾಗ ಕಾಣಿಸುವುದಿಲ್ಲ. ಕಾಣಿಸುವುದೇ ಹುಟ್ಟು, ಕಾಣಿಸದಿರುವುದೇ ಸಾವು. ಇದನ್ನೇ ಭಾರತೀಯ ಚಿಂತಕರು ಜೀವಿಯ ಪ್ರಕ್ರಿಯೆಗಳಲ್ಲಿ ಅನ್ಯೋನ್ಯವೆಂದು ಸಾರಿದರು.

ಗರುಡ ಪುರಾಣವು ಮರಣವು ಹೇಗೆ ಸಂಭವಿಸುತ್ತದೆ ಎಂಬುದನ್ನು ವಿವರಿಸಿದೆ: ವಿಚಿತ್ರವೆಂದರೆ ಚರಮ ಕಾಲದಲ್ಲಿ, ಅಂತಿಮ ಕ್ಷಣದಲ್ಲಿ ಮೃತ್ಯುಮುಖವನ್ನು ಪ್ರವೇಶಿಸುತ್ತಿರುವಾಗ, ಮರಣೋನ್ಮುಖನಿಗೆ ದೈವೀ ದೃಷ್ಟಿಯು ಉಂಟಾಗುತ್ತದೆ. ಮರಣೋನ್ಮುಖನಾದವನು ಆಗ ಇಹಪರಗಳೆರಡನ್ನೂ ಒಟ್ಟಿಗೆ ನೋಡುತ್ತಾನೆ. ಆದರೆ ಏನನ್ನೂ ಮಾತನಾಡಲಾರದವನಾಗಿರುತ್ತಾನೆ. ಕ್ರಮೇಣ ಅವನ ಇಂದ್ರಿಯ ಸಮೂಹವು ವಿಕಲವಾಗುತ್ತದೆ. ಚೈತನ್ಯವು ಉಡುಗುತ್ತದೆ. ಇಂತಹ ಸಮಯದಲ್ಲಿ ಪ್ರಾಣವು ನಿಧಾನವಾಗಿ ದೇಹದಿಂದ ದೂರಹೊರಡುತ್ತದೆ. ಸ್ವಸ್ಥಾನದಿಂದ ಶ್ವಾಸವು ನಿರ್ಗಮಿಸುವಾಗ ಆತನಿಗೆ ಸಹಸ್ರ ಚೇಳುಗಳು ಒಟ್ಟಾಗಿ ಕುಟುಕಿದಂತಾಗುತ್ತದೆ. ಪ್ರಾಣವಾಯುವು ಅಧೋದ್ವಾರದಿಂದ ದೇಹವನ್ನು ತ್ಯಜಿಸಿ ನಿರ್ಗಮಿಸುತ್ತದೆ - ದೈವೀ ದೃಷ್ಟಿಯು ಲಭ್ಯವಾದರೂ ಅಸಹಾಯಕನಾಗಿ ಮರಣವನ್ನಪ್ಪುತ್ತಾನೆ.

**ಜೀವದ ನಿತ್ಯತೆ:** ಮಹಾಭಾರತದಲ್ಲಿ ದೇಹಾಂತ್ಯದ ನಂತರ ಜೀವದ ನಿತ್ಯತೆಯನ್ನು ಕುರಿತು ಭೃಗು ಮಹರ್ಷಿಯು ವಿಶ್ಲೇಷಣೆ ಮಾಡುತ್ತಾ ಈ ಮಾತುಗಳನ್ನು ಹೇಳುತ್ತಾನೆ: ದೇಹನಾಶವಾದರೂ ಜೀವ ನಾಶ ಹೊಂದುವುದಿಲ್ಲ. ಕೊಟ್ಟ ದಾನವಾಗಲೀ, ಮಾಡಿದ ಕರ್ಮಫಲವಾಗಲೀ ಎಂದಿಗೂ ನಾಶವಾಗುವುದಿಲ್ಲ. ಶರೀರವು ಮಾತ್ರವೇ ನಷ್ಟವಾಗಿ ಹೋಗುತ್ತದೆ. ಪ್ರಾಣಿಯು ದೇಹಾಂತರವನ್ನು ಹೊಂದುತ್ತಾನೆ. ಸಮಿತ್ತುಗಳು ದಗ್ಧವಾಗಿ ಹೋದರೂ, ಇಂಧನಾಂತರ್ಗತ ವಾಗಿರುವ ಅಗ್ನಿಯು ಆರಿಹೋಗದೇ ಕಾಣಿಸಿಕೊಳ್ಳುವಂತೆ, ಶರೀರವನ್ನು ಆಶ್ರಯಿಸಿರುವ ಜೀವವು ನಷ್ಟವಾಗದೆ ಚೈತನ್ಯ ವಿಶಿಷ್ಟವಾಗಿಯೇ ಇರುತ್ತದೆ.

**ಮರಣತತ್ತ್ವ:** ಭೃಗು ಮಹರ್ಷಿಗಳು ಮೇಲೆ ಹೇಳಿದಂತೆ ದೇಹವು ಮಾತ್ರ ಸಾವನ್ನು ಅಪ್ಪುತ್ತದೆ. ಕೊಟ್ಟ ದಾನವಾಗಲೀ, ಕರ್ಮಫಲವಾಗಲೀ ಎಂದಿಗೂ ನಾಶವಾಗುವುದಿಲ್ಲ ಎನ್ನುವ ವಿಚಾರ ಪುನರ್ಜನ್ಮ ಸಿದ್ಧಾಂತಕ್ಕೆ ಬೀಜರೂಪವಾಗಿದೆ. ಈ ರೀತಿ ಮಾಡಿದ ಕರ್ಮಫಲಗಳೆಲ್ಲವೂ ಶರೀರನಾಶವಾದರೂ, ಸೂಕ್ಷ್ಮಶರೀರದಲ್ಲಿ ಉಳಿದುಕೊಂಡಿರುತ್ತದೆ. ಬೆಂಕಿಯಿಂದ ನಾಶವಾಗುವುದೂ ಸಾವಿಗೀಡಾಗಿ ಕೊನೆ ಆಗುವುದು ಭೌತಶರೀರವೇ ಹೊರತು ಸೂಕ್ಷ್ಮಶರೀರವಲ್ಲ.

ಭೃಗು ಮಹರ್ಷಿಗಳು ಹೇಳಿದ ಮರಣತತ್ತ್ವವು ತರ್ಕಬದ್ಧವೂ, ಸರಳವೂ ಆಗಿರುತ್ತದೆ. ಅವರು ಇದನ್ನು ಹೇಳುತ್ತಾ, ದೇಹವು ನಾಶವಾದರೂ ಜೀವವು ನಾಶವಾಗುವುದಿಲ್ಲ, ಅಜ್ಞಾನಿಗಳು ಮಾತ್ರವೇ ಜೀವನನ್ನು ಮೃತನಾದನೆಂದು ಹೇಳುತ್ತಾರೆ. ಈ ವಿಚಾರವೇ ತಪ್ಪಾದುದು. ಜೀವನವೆಂಬುದು ಅವಿನಾಶಿ. ಪಂಚಭೂತಗಳ ವೈಪರೀತ್ಯದಿಂದ ದೇಹವು ನಾಶವಾದರೆ, ಜೀವವು ಈ ದೇಹವನ್ನು ಬಿಟ್ಟು ಬೇರೊಂದು ದೇಹವನ್ನು ಸೇರಿಕೊಳ್ಳುತ್ತದೆ. ಒಟ್ಟಾಗಿ ಸೇರಿಕೊಂಡಿದ್ದ ಪಂಚಭೂತಗಳು ಪ್ರತ್ಯೇಕವಾಗಿ ಶರೀರವು ಬಿದ್ದುಹೋಗುತ್ತದೆ ಎಂಬುದಾಗಿ ಸಾಮಾನ್ಯರಿಗೂ ಅರ್ಥವಾಗುವಂತೆ ಹೇಳಿರುತ್ತಾರೆ.

**ಛಾಂದೋಗ್ಯದಲ್ಲಿ ಸಾವಿನ ವಿವರಣೆ:** ಮನುಷ್ಯನ ಸಾವು ಹೇಗೆ ಬರುತ್ತದೆ ಎನ್ನುವ ಬಗ್ಗೆ ಛಾಂದೋಗ್ಯ ಉಪನಿಷತ್ತಿನಲ್ಲಿ (6-8-6) (**''ಮನಃ ಪ್ರಾಣೇ ತ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ''**) ವಿವರಣೆಯೊಂದು ಬಂದಿದೆ: ''ದೇಹವು ನಾಶವಾದಾಗ ಜೀವನಿಂದ ಅಧಿಷ್ಠಿತವಾದ ಪ್ರಾಣೇಂದ್ರಿಯಗಳ ಸಂಘಾತವು ಯಾವ ಕ್ರಮದಲ್ಲಿ ದೇಹವನ್ನು ಬಿಟ್ಟು ಬೇರೊಂದು ದೇಹಕ್ಕೆ ಹೋಗುತ್ತದೆ ಎಂಬುದನ್ನು ಮನೋಜ್ಞವಾಗಿ ಹೇಳಿದೆ. ಸಾಯುವ ಕಾಲದಲ್ಲಿ ಮೊದಲು ಮಾತು ನಿಂತು ಹೋಗುತ್ತದೆ. ಆದರೆ ಮನಸ್ಸು ಇನ್ನೂ ಕೆಲಸ ಮಾಡುತ್ತಿರುತ್ತದೆ. ಏಕೆಂದರೆ ಮನಸ್ಸಿನಲ್ಲಿ ಏನೇನನ್ನು ಯೋಚಿಸುತ್ತಾನೆಯೋ ಅದನ್ನೇ ಮಾತನಾಡುವುದು. ಅನಂತರ ಮನಸ್ಸು ಸುಷುಪ್ತಿಯಲ್ಲಿರುವಂತೆ (ನಾವು ನಿದ್ರಿಸುವಾಗ ಅದು ಎಲ್ಲಿರುತ್ತದೆಯೋ ಹಾಗೆ) ಪ್ರಾಣದಲ್ಲಿ ಉಪಸಂಹೃತವಾಗುತ್ತದೆ. ಆಗ ಅವನನ್ನು ನೋಡುವ ಜನರು ''ಇವನಿಗೆ ಜ್ಞಾನ ತಪ್ಪಿದೆ'' ಎಂದು ಹೇಳುವರು. ಅನಂತರ ಪ್ರಾಣವು ತೇಜಸ್ಸಿನಲ್ಲಿ ಲಯವಾಗುತ್ತದೆ. ಆಗ ಅವನನ್ನು ನೋಡಿದ ಜನರು ''ಮೈ ಇನ್ನೂ ಬಿಸಿಯಾಗಿದೆ'' ಎನ್ನುವರು. ಕಡೆಯಲ್ಲಿ ತೇಜಸ್ಸೂ ಸಹ ಬ್ರಹ್ಮದಲ್ಲಿ ಲಯವಾಗುತ್ತದೆ. ಕನ್ನಡಿಯಲ್ಲಿ ಪ್ರತಿಬಿಂಬಿತವಾದ ಮುಖವು ಕನ್ನಡಿಯು ಒಡೆದು ಹೋದಾಗ ತನ್ನ ನಿಜವಾದ ಮುಖದಲ್ಲಿ ಲಯವಾಗುವಂತೆ. ಮನಸ್ಸು ಮೊದಲಾದ ಇಂದ್ರಿಯಗಳು ಲಯವನ್ನು ಹೊಂದಿದಾಗ ಜೀವಾತ್ಮನೂ ಕೂಡಾ ತನ್ನ ಸ್ವರೂಪದಲ್ಲಿ ನಿಲ್ಲುತ್ತಾನೆ. ಜ್ಞಾನಿಯೂ ಮುಕ್ತನಾದವನೂ ಹಿಂದಿರುಗುವುದಿಲ್ಲ. ಆದರೆ ಅಜ್ಞಾನಿಯಾದವನು ತನಿನಿದ್ರೆಯಿಂದ ಎಚ್ಚರವಾಗುವಂತೆ ತನ್ನ ಮೂಲವಾದ ಸದ್ವಸ್ತುವಿನಿಂದಲೇ ಹೊರಟು ಪುನಃ ದೇಹವನ್ನು ಪಡೆಯುವನು.

**ಜನ್ಮಾಂತರಕ್ಕೆ ಕಾರಣವಾದ ಕರ್ಮತತ್ತ್ವ:** ಹುಟ್ಟು-ಸಾವುಗಳೆಂಬ ಸಂಸಾರ ಚಕ್ರದ ಉರುಳುವಿಕೆಗೆ ಪ್ರಧಾನವಾದ ತಿರುಗುಣಿಯೇ ಕರ್ಮತತ್ತ್ವ. ನಾವು ಮನಸ್ಸಿನಿಂದಲೂ, ಮಾತಿನಿಂದಲೂ, ದೈಹಿಕವಾಗಿಯೂ ಮಾಡುವ ಎಲ್ಲ ಕರ್ಮಗಳೂ ಆ ಕ್ಷಣವೇ ಫಲಗಳನ್ನು ಕೊಡುವುದಿಲ್ಲ. ಕರ್ತನ ಭಾವತೀವ್ರತೆ, ಸ್ವಭಾವ, ಕರ್ತೃತ್ವ ಶಕ್ತಿ ಇವುಗಳನ್ನು ಅವಲಂಬಿಸಿ ಕರ್ಮಗಳು ಫಲ ಕೊಡುವುದರಲ್ಲಿ ತಾರತಮ್ಯವಿರುತ್ತದೆ. ಕೆಲವು ಕರ್ಮಗಳ ಫಲವು ಈ ಜನ್ಮದಲ್ಲಿ ಲಭ್ಯವಾಗದೇ ಹೋಗಬಹುದು. ಹೀಗೆ ಕಾಲಾಂತರದಲ್ಲಿಯೋ, ಲೋಕಾಂತರದಲ್ಲಿಯೋ, ಜನ್ಮಾಂತರದಲ್ಲಿಯೋ ಫಲವನ್ನು ಕೊಡುವುದಕ್ಕಾಗಿ ಸಂಗ್ರಹವಾದ ಅತಿಶಯಶಕ್ತಿಯುತವಾದ ಕರ್ಮಕ್ಕೆ ಸಂಚಿತಕರ್ಮವೆಂದು ಹೆಸರು. ಈ ಶಕ್ತಿಯ ಮೂಲವೂ, ಕೇಂದ್ರವೂ ನಮ್ಮೊಳಗಿನ ಸೂಕ್ಷ್ಮ ಶರೀರದ ಸುಪ್ತವಾಗಿರುವ ಸಂಸ್ಕಾರದಲ್ಲಿ ಸೇರಿಕೊಂಡಿದೆ. ಇದು ಕಾಲಮಹಿಮೆಯಿಂದ ಜಾಗೃತಿ ಹೊಂದಿ ಪ್ರಕಟವಾದಾಗ ಅದು ಪ್ರಬಲವಾದ ವಾಸನೆ ಎನಿಸಿಕೊಳ್ಳುತ್ತದೆ.

ವಾಸನೆಗಳಲ್ಲಿ ಶುಭವಾಸನೆ- ಅಶುಭವಾಸನೆಯೆಂದು ಎರಡು ಬಗೆ. ದೇಹವಾಸನೆ, ಲೋಕವಾಸನೆ, ಪ್ರಬಲವಾದ ವಾಸನೆಯೆಂಬುದಾಗಿ ಅನಂತಾನಂತ ವಾಸನೆಗಳು - ಹೀಗೆ ಮೂರು ಬಗೆ. ಈ ಜನ್ಮದಲ್ಲಿಯೇ ಫಲವನ್ನು ಕೊಟ್ಟು ಬರಿದಾಗದೆ, ಉಳಿದಿರುವ ಕರ್ಮಫಲಗಳೆಲ್ಲಾ ಸಂಗ್ರಹವಾಗಿ ಸಂಚಿತಕರ್ಮ ಎನಿಸುತ್ತದೆ. ಈ ಸಂಚಿತಕರ್ಮವು ಫಲವನ್ನು ಕೊಡದೆಯೇ ಬರಿದಾಗುವುದಿಲ್ಲ. ಆದರೆ ಫಲಾನುಭವಕ್ಕೆ ಜೀವನಿಗೆ ದೇಹವು ಅಗತ್ಯವಲ್ಲವೇ? ಜೀವಿಯ ಪಾಪ-ಪುಣ್ಯ ಸ್ವಭಾವಕ್ಕೆ ಅನುಗುಣವಾಗಿ ಆತನು ಸಸ್ಯವರ್ಗದಲ್ಲೋ, ಪ್ರಾಣಿವರ್ಗದಲ್ಲೋ, ಮನುಷ್ಯವರ್ಗದಲ್ಲಿಯೋ ಜನಿಸುತ್ತಾನೆ. ಹಿಂದಿನ ಜನ್ಮಗಳ ಸಂಚಿತ ಕರ್ಮಗಳ ಫಲಾನುಭವವು ಈ ಹೊಸಜನ್ಮದ ದೇಹದಿಂದಲೇ ಪ್ರಾರಂಭವಾಗುವುದರಿಂದ ಇದನ್ನೇ ಪ್ರಾರಬ್ಧ ಎಂದು ಹೇಳುತ್ತಾರೆ. ಈ ಹೊಸಜನ್ಮದಿಂದ ಮತ್ತೆ ಮರಣಕಾಲದವರೆಗೆ ಮಾಡುವ ಎಲ್ಲಾ ಕರ್ಮಗಳೂ ಪ್ರಾರಬ್ಧಕರ್ಮಗಳು ಎಂದೂ, ಅನುಭವಿಸುವ ಎಲ್ಲಾ ಫಲಗಳೂ ಪ್ರಾರಬ್ಧ ಫಲಗಳೆಂದೂ ಕರೆಸಿಕೊಳ್ಳುತ್ತದೆ.

**ಪ್ರಾರಬ್ಧವೇ ಹುಟ್ಟುಸಾವಿಗೆ ಕಾರಣ :** ಹೊಸದಾಗಿ ಪಡೆದ ಈ ದೇಹದ ಆಯುಷ್ಯ, ಆರೋಗ್ಯ, ವಿದ್ಯೆ, ಉದ್ಯೋಗ, ಪತಿ, ಪತ್ನೀ, ಸಂತಾನಸುಖ, ಜೀವನ ಸುಖಗಳೆಲ್ಲವೂ ಹಿಂದಿನ ಸಂಚಿತಕರ್ಮಗಳ ಮೂಲಕವೇ ತೀರ್ಮಾನವಾಗುವುದರಿಂದ ಇದರ ಭೋಗಕಾಲವನ್ನೇ ಪ್ರಾರಬ್ಧ ಎಂದು ಕರೆಯುವೆವು.

ಈಗ ನಾವು ಪ್ರಾರಬ್ಧ ಕರ್ಮಗಳನ್ನು ಅನುಭವಿಸುತ್ತಲೇ ಇರುತ್ತೇವೆ. ಜತೆಜತೆಗೆ ಸಂಕಲ್ಪಪೂರ್ವಕವಾಗಿಯೂ, ಇಚ್ಛಾಪೂರ್ವಕವಾಗಿಯೂ ಮಾಡುವ ಶುಭಕರ್ಮಗಳೂ ಸಹ ನಮ ಸಂಚಿತ ಕರ್ಮದ ಗುಪ್ತಭಂಡಾರವನ್ನು ಬೆಳೆಸುತ್ತಿರುತ್ತವೆ. ಮುಂದೆ ಸತ್ಕರ್ಮಫಲಗಳು ಜನ್ಮಾಂತರಗಳಲ್ಲಿ ದೊರಕಬೇಕೆನ್ನುವ ಅಪೇಕ್ಷೆಯಿಂದ ಮಾಡುವ ಕರ್ಮಗಳಿಗೆ ಆಗಾಮಿಕರ್ಮಗಳು ಎನ್ನುತ್ತಾರೆ. ಹೀಗೆ ಕರ್ಮಗಳಲ್ಲಿ ಸಂಚಿತ, ಪ್ರಾರಬ್ಧ, ಆಗಾಮಿ ಕರ್ಮಗಳೆಂಬುದಾಗಿ ಮೂರು ಬಗೆ.

ಇವುಗಳಲ್ಲಿ ಫಲವನ್ನು ಕೊಡುವುದಕ್ಕೆ ಸಿದ್ಧವಾಗಿ, ಪಕ್ವವಾಗಿರುವ ನಮ್ಮ ಹಿಂದಿನ ಸಂಚಿತ ಕರ್ಮವೇ ದೈವ, ಪ್ರಾರಬ್ಧ, ವಿಧಿ ಎನ್ನಿಸಿಕೊಳ್ಳುತ್ತದೆ. ಪಾಪ-ಪುಣ್ಯ ಎಂಬುದು ಶಾಸ್ತ್ರಾದಿಗಳಲ್ಲಿ ಲಭ್ಯವಿರುವುದರಿಂದ ಮನುಷ್ಯನಿಗೆ ಕ್ರಿಯಾ ಸ್ವಾತಂತ್ರ್ಯ ಇದ್ದೇ ಇದೆ. ಆದುದರಿಂದ ದೇವರು ನಡೆಸಿದಂತಾಗುತ್ತದೆ ಎಂದು ಹೇಳಿ ಏನನ್ನು ಬೇಕಾದರೂ ಮಾಡಲಾಗದು.

ಮರಣ - ಬದುಕಿಗೆ ಕಾರಣವಾದ ಪ್ರಾರಬ್ಧ ಶಕ್ತಿಯು ಎಷ್ಟೊಂದು ಪ್ರಬಲವಾದುದು, ಎಷ್ಟೊಂದು ಶಕ್ತಿಯುತವಾದದ್ದು ಎಂಬುದನ್ನು ಕುರಿತು ಭರ್ತೃಹರಿಯು ಬ್ರಹ್ಮಾಯೇನ **ಕುಲಾಲವನ್ನಿಯಮಿತೋ ಬ್ರಹ್ಮಾಂಡ ಭಾಂಡೋದರೇ। ವಿಷ್ಣುರ್ಯೇನ ದಶಾವತಾರ ಗಹನೇಕ್ಷಿಪ್ತೋ ಮಹಾಸಂಕಟೇ। ರುದ್ರೋಯೇನ ಕಪಾಲಪಾಣಿ ಪುಟಕೇ ಭಿಕ್ಷಾಟನಂ ಕಾರಿತಃ ಸೂರ್ಯೋ ಭ್ರಾಮ್ಯತಿ ನಿತ್ಯಮೇವ ಗಗನೇ ತಸ್ಮೈ ನಮಃ ಕರ್ಮಣೇ॥** ಕರ್ಮಾಧೀನನಾಗಿಯೇ ಸೃಷ್ಟಿಕರ್ತ ಬ್ರಹ್ಮನು, ಕುಂಬಾರನು ಮಡಕೆಗಳನ್ನು ಮಾಡಿದ ಹಾಗೆ, ಜೀವಿಗಳನ್ನು ಸೃಷ್ಟಿಸುತ್ತಾನೆ. ವಿಷ್ಣುವಾದರೋ ಪ್ರಾರಬ್ಧಕ್ಕೆ ಒಳಗಾಗಿಯೇ ದಶಾವತಾರಗಳನ್ನೆತ್ತಿದನು. ಮಹೇಶ್ವರನಾದರೋ ಪ್ರಾರಬ್ಧಕ್ಕೆ ಸಿಲುಕಿ ಬ್ರಹಕಪಾಲದಲ್ಲಿ ಭಿಕ್ಷಾಟನೆ ಮಾಡುವಂತಾಯಿತು. ಮಹಾತೇಜಸ್ವಿಯಾದ ಸೂರ್ಯನೂ ಸಹ ವಿಧಿ ವಶನಾಗಿಯೇ ಬಿಡುವಿಲ್ಲದೆ ನಿತ್ಯವೂ ಅಂತರಿಕ್ಷದಲ್ಲಿ ಭ್ರಮಿಸುತ್ತಾನೆ. ಆದುದರಿಂದ ಅಸಾಧಾರಣ ಸಾಮರ್ಥ್ಯವುಳ್ಳ ಆ ಪ್ರಾರಬ್ಧಕರ್ಮಕ್ಕೆ ಅನಂತನಮಸ್ಕಾರಗಳು ''ಎಂದಿರುವನು.



ಭರ್ತೃಹರಿ

ವಾಲ್ಮೀಕಿ ರಾಮಾಯಣದಲ್ಲಿ ಧರ್ಮಭೀರುವೂ, ಪುತ್ರವಾತ್ಸಲ್ಯಭರಿತಳೂ, ಉದಾರಚರಿತಳೂ ಆದ ಕೌಸಲ್ಯೆಯು ಅರಣ್ಯವಾಸಕ್ಕೆ ಹೊರಡಲು ನಿಂತ ಶ್ರೀರಾಮನಿಗೆ ''ನೂನಂ ಕಾಲೋ ದುರತ್ಯಯಃ'' - ಕಾಲಗತಿಯನ್ನು ಮೀರಲು ಯಾರಿಗೂ ಸಾಧ್ಯವಿಲ್ಲ ಎಂದು ಹೇಳುತ್ತಾಳೆ.

ಪ್ರಸಿದ್ಧ ದಾರ್ಶನಿಕರಾದ ಜೆ.ಕೃಷ್ಣಮೂರ್ತಿಗಳವರು ''ಅತ್ಯಂತ ಅನಿಶ್ಚಿತವಾದ ಈ ಜಗತ್ತಿನಲ್ಲಿ ನಿಶ್ಚಿತವಾದ ಒಂದೇ ಅಂಶವೆಂದರೇ ಸಾವು. ಆದರೆ ಸಾವು ಯಾರಿಗೆ, ಎಲ್ಲಿ ಯಾವಾಗ, ಹೇಗೆ, ಏಕೆ ಮೊದಲಾದವು ಅತ್ಯಂತ ಅನಿಶ್ಚಿತ. ಅನೂಹ್ಯ, ತರ್ಕಕ್ಕೆ ಸಿಗದಿದ್ದದ್ದು, ಇದನ್ನು ಮುಂದಾಗಿ ಹೇಳುವವರಾರು?'' ಎಂದಿದ್ದಾರೆ.

**ಮಕ್ಕಳ ವಿಶೇಷ ಕರ್ತವ್ಯ:** ಗತಿಸಿದ ತಂದೆ ತಾಯಿಯರು ಮಗನಿಗೆ ಗುರುಗಳೂ, ಪ್ರತ್ಯಕ್ಷ ದೇವರೇ ಆಗಿರುತ್ತಾರೆ. ಮೃತರಾದ ತಂದೆಯಾಗಲೀ, ತಾಯಿಯಾಗಲೀ ತಮ್ಮ ಪುತ್ರರ ಏಳಿಗೆಗಾಗಿ ಜೀವನವಿಡೀ ಶ್ರಮಿಸಿರುತ್ತಾರೆ. ಪಿತೃಋಣ ಮತ್ತು ಮಾತೃಋಣವು ಮಗನ ಮೇಲೆ ಪ್ರಬಲವಾದುದು. ವಂಶೋದ್ಧಾರಕ್ಕಾಗಿ ಮಕ್ಕಳನ್ನು ಹೆತ್ತು ಹೊತ್ತು ಸಲಹಿ ಸಾಕಿದ ಇವರ ತ್ಯಾಗ, ಬಲಿದಾನಗಳನ್ನು ಮಕ್ಕಳು ಕೇವಲವಾಗಿ ಭಾವಿಸಲು ಸಾಧ್ಯವೇ ಇರುವುದಿಲ್ಲ. ಹೀಗಿರುವಾಗ ಅವರು ಮೃತರಾದರೆ ಮಕ್ಕಳ ಮೇಲೆ ವಿಶೇಷವಾದ ಕರ್ತವ್ಯಗಳಿರುತ್ತದೆ. ಮಾತಾಪಿತೃ ವಿಯೋಗವು ಎಂತಹವರಿಗೇ ಆಗಲಿ ದುಃಖದ ಸಮಯವೇ. ಆದರೂ, ಅವರು ಈ ಆಘಾತದಿಂದ ಚೇತರಿಸಿಕೊಂಡು ಅವರ ಪಾರ್ಥಿವ ಶರೀರಕ್ಕೆ ವಿಧ್ಯುಕ್ತವಾದ ಸಂಸ್ಕಾರಗಳನ್ನು ನೆರವೇರಿಸಿ ಅವರಿಗೆ ಸದ್ಗತಿಯುಂಟಾಗುವಂತೆ ಮಾಡುವುದು ಮಕ್ಕಳ ಕರ್ತವ್ಯವಾಗಿರುತ್ತದೆ. ಸಂಸ್ಕಾರ ವಿಧಿಗಳು ಮತ್ತು ಅದರ ಹಿಂದಿರುವ ತತ್ತ್ವ ವಿಚಾರಗಳನ್ನು ಅರ್ಥಮಾಡಿಕೊಳ್ಳಬೇಕು.

ಸೂಕ್ಷ್ಮಶರೀರದಲ್ಲಿರುವ ಜೀವಿಗೆ ಬೇರೊಂದು ಶರೀರವು ದೊರಕಬೇಕಾದರೆ ಅದು ಮೃತನ ಮಕ್ಕಳು ಮಾಡುವ ವಿಧಿವತ್ತಾದ ದಶಗಾತ್ರವಿಧಿಯಿಂದ ಸಾಧ್ಯ. ಹವನಾದಿ ಕಲಾಪಗಳೇ ಔರ್ಧ್ವದೈಹಿಕ ಕರ್ಮ. ಇದು ಅಪರಕರ್ಮ, ಪಿತೃಕರ್ಮ, ಅಂತ್ಯಸಂಸ್ಕಾರ, ಅಂತ್ಯೇಷ್ಟಿ ಎಂಬುದಾಗಿ ನಾನಾ ಹೆಸರುಗಳಿಂದ ಕರೆಯಲ್ಪಡುತ್ತದೆ. ವಿಶ್ವದ ಎಲ್ಲ ಜನಾಂಗಗಳವರೂ, ಎಲ್ಲ ಧರ್ಮದವರೂ ಅವರವರ ಆಚಾರಗಳಂತೆ ಈ ವಿಧಿಯನ್ನು ಶ್ರದ್ಧೆಯಿಂದ ಆಚರಿಸುತ್ತಾರೆ. ಆಚಾರಗಳು ಬದಲಾವಣೆಯಿಂದ ಕೂಡಿದ್ದರೂ ಸಹ, ಮೃತರಿಗೆ ಸದ್ಗತಿ ದೊರೆಯಲೆಂಬುದೇ ಎಲ್ಲ ಧರ್ಮಗಳ ಅಂತಿಮ ಗುರಿಯಾಗಿರುತ್ತದೆ.

ಜೀವನದಲ್ಲಿ ನಾವು ಮಾಡಿದ ಪಾಪಪುಣ್ಯಗಳೆಂಬ ಕರ್ಮಗಳು ವಾಸನಾ ರೂಪದಲ್ಲಿ ಸೂಕ್ಷ್ಮಶರೀರದಲ್ಲಿ ಅಡಗಿರುತ್ತದೆ. ಸೂಕ್ಷ್ಮಶರೀರವು ಬೆಂಕಿಯಿಂದ ಬೂದಿಯಾಗುವುದಿಲ್ಲ. ಮಕ್ಕಳೇ ಮುಂತಾದ ಅಧಿಕಾರಿಗಳು ಈ ಅಂತ್ಯಕ್ರಿಯೆಯನ್ನು ನೆರವೇರಿಸದಿದ್ದಲ್ಲಿ ವಾಯು ರೂಪದಲ್ಲಿ ಗತಿಸಿದವರು ಪ್ರೇತಸ್ವರೂಪರಾಗುತ್ತಾರೆ. ಈ ಪ್ರೇತಗಳು ತಾವೇ ಅತಿಯಾದ ಯಾತನೆ, ಸಂಕಟ, ಬಾಯಾರಿಕೆ, ದಾಹ ಇತ್ಯಾದಿಗಳಿಂದ ಬಹುದಿನಗಳು ಅನರ್ಥವನ್ನು ಅನುಭವಿಸುತ್ತವೆ. ಕರ್ತೃವಿನ ಬಂಧು ಬಾಂಧವರಿಗೆ ಹಿಂಸೆ, ಕೀಟಲೆ, ನೋವು ಕೊಡುತ್ತವೆ. ಅಂತ್ಯೇಷ್ಟಿ ಕ್ರಿಯೆಗಳ ಕಾರಣ ಈ ವಾಯುರೂಪಿ ಪ್ರೇತದ ಶರೀರವು ಅಂಗುಷ್ಠಮಾತ್ರವಿರುತ್ತದೆಂದು ಸ್ಮೃತಿಗಳು ಹೇಳುತ್ತವೆ. ಈ ಶರೀರಕ್ಕೆ ತನ್ನ ಪೂರ್ವವಾಸನೆಗಳ ಪ್ರೇರಣೆಯಿಂದ ತಿನ್ನಬೇಕು, ಸುಖ ಪಡಬೇಕು ಎನ್ನುವಂತಹ ಅನೇಕ ಬಗೆಯ ಆಸೆಗಳನ್ನು ಈಡೇರಿಸಿಕೊಳ್ಳಬೇಕೆಂಬ ಅದಮ್ಯ ಹಂಬಲವಿರುತ್ತದೆ. ಈ ಕಾರಣದಿಂದಾಗಿ ಅಧಿಕಾರಿಗಳಾದ ಪುತ್ರಾದಿಗಳು ಅಂತ್ಯೇಷ್ಟಿಯನ್ನು ಆಚರಿಸಬೇಕು. ಇದು ದ್ವಿಜರು ಮಾತ್ರವೇ ಮಾಡಬೇಕಾದ ಕರ್ಮವಲ್ಲ, ಸಕಲರೂ ಅವರವರ ಸಂಪ್ರದಾಯಗಳಂತೆ ಆಚರಿಸಲೇಬೇಕಾದದ್ದು.

ಈ ವಿಧಿಗಳಿಂದ ಅಂಗುಷ್ಠ ಮಾತ್ರದ ಸೂಕ್ಷ್ಮ ಶರೀರವು, ಹಸ್ತಮಾತ್ರದ ಯಾತನಾ ಶರೀರವಾಗಿ ತನ್ನ ಕರ್ಮಫಲವನ್ನು ಅನುಭವಿಸಲು ಶಕ್ಯವಾಗುತ್ತದೆ. ಮುಖ್ಯವಾಗಿ ಬಾಂಧವರನ್ನು ಪ್ರೇತರಾಗಿ ಹಿಂಸಿಸುವ ಸಂಕಟನಿವಾರಣೆ ತಪ್ಪುತ್ತದೆ. ಗರುಡಪುರಾಣವು ಈ ಪ್ರೇತವು ಕೇಶೋದಕ, ವಾಸೋದಕ, ಶ್ಲೇಷ್ಮ, ಕಣ್ಣೀರು ಇಂತಹ ಹೊಲಸನ್ನು ಸೇವಿಸುತ್ತಾ ಪದೆ ಪದೇ ವಿಚಿತ್ರ ವರ್ತನೆಗಳಿಂದ ಬಂಧುಗಳಿಗೆ ಸಂತಾನಹೀನತೆ, ದಾರಿದ್ರ್ಯ, ದೌರ್ಮನಸ್ಯ, ಮೂದೇವಿತನ, ಕಾರ್ಯ ವಿಘ್ನಗಳು, ಸಂತತಿಯಲ್ಲಿ ಅಂಗಹೀನತ್ವ - ಇಂತಹವುಗಳೆಲ್ಲಾ ಆಗುವುದೆಂದೂ ಪುರಾಣವು ಹೇಳುತ್ತದೆ. ಪಿತೃಗಳು ಬದುಕಿರುವಾಗ ಭಕ್ತಿಶ್ರದ್ಧೆಗಳಿಂದ ಅವರ ಶುಶ್ರೂಷೆ ಮಾಡಬೇಕು. ಅವರ ಅವಸಾನದ ನಂತರ ವಿಧಿವತ್ತಾಗಿ ಅಂತ್ಯೇಷ್ಟಿ ಕರ್ಮಗಳನ್ನು ಮಾಡಬೇಕು. ಇದರಿಂದ ಅವರಿಗೂ ಸದ್ಗತಿ ಪ್ರಾಪ್ತಿ ಆಗುವುದಲ್ಲದೆ, ಕರ್ತನಿಗೂ, ಬಂಧುಬಾಂಧವರಿಗೂ ನೆಮ್ಮದಿ ದೊರೆಯುತ್ತದೆ.

**ಮರಣಕಾಲದ ವಿಧಿಗಳು:** ತನ್ನ ಕರ್ಮಫಲಕ್ಕೆ ಅನುಸಾರವಾಗಿಯೇ ವ್ಯಕ್ತಿಯ ಸಾವು ಸಂಭವಿಸುವುದು. ಅದು ಬಾ ಎಂದರೆ ಬರುವುದಿಲ್ಲ, ಬೇಡ ಎಂದರೆ ನಿಲ್ಲುವುದಿಲ್ಲ. ಆದುದರಿಂದ ಜೀವಿಯು ದೇಹತ್ಯಾಗ ಮಾಡಲೇಬೇಕು. ಹಾಗೆ ಸಾವು ಸಂಭವಿಸಿದಾಗ ಆತನ ಹತ್ತಿರದ ಬಂಧುಗಳಿಗೆ ಶೋಕ ಸಹಜವಾದದ್ದೆ. ವರ್ಷಾನುಕಾಲ ಜತೆಯಲ್ಲಿದ್ದು, ಕಷ್ಟಸುಖಗಳಲ್ಲಿ ನಿಕಟವರ್ತಿಯಾಗಿದ್ದು ಆದರ್ಶಪ್ರಾಯನಾಗಿದ್ದವನು ತೀರಿಕೊಂಡ ದುಃಖವು ಆಳವಾದದ್ದೇ. ಆದರೆ ಸಾವು ನಿಶ್ಚಿತ ಎಂದೂ ತಿಳಿದ ಮೇಲೆ, ಎಲ್ಲೆ ಮೀರಿ ಶೋಕಿಸುವುದು ವೃಥಾ ಸಲ್ಲದು. ಮನಸ್ಸನ್ನು ಹತೋಟಿಗೆ ತಂದುಕೊಂಡು ತತ್‌ಕ್ಷಣವೇ ಮಾಡಬೇಕಾದ ಮುಂದಿನ ಕೆಲಸಗಳ ಬಗ್ಗೆ ಗಮನಕೊಡುವವನೇ ಉತ್ತಮನು. ಇಂತಹ ಸಂಕಟದ ಸಮಯದಲ್ಲಿ ಬಂಧುಬಾಂಧವರುಗಳು ಬಂದು ನೆರೆದರೂ ಅವರಿಗೆ ತತ್‌ಕ್ಷಣ ಮಾಡಬೇಕಾದ ಕೆಲಸಗಳೇನು ಎಂಬುದು ಅರಿವಾಗದೆ, ಕೇವಲ ಶೋಕದಲ್ಲಿ ಇದ್ದು ಬಿಡುತ್ತಾರೆ. ಆದುದರಿಂದಲೇ ಇಂತಹ ಸಮಯಗಳಲ್ಲಿ ತಿಳಿದವರು, ಲವಲವಿಕೆಯಿಂದಿರುವ ಜನರು, ಹಿರಿಯರು ಈ ಕೆಳಕಂಡ ಅಂಶಗಳನ್ನು ತತ್‌ಕ್ಷಣವೇ ಗಮನಿಸಿ ಅದನ್ನು ಆಚರಿಸಲು ಕ್ಷಿಪ್ರಕ್ರಮಗಳನ್ನು ತೆಗೆದುಕೊಳ್ಳಬೇಕು.

**ಸಾವು ಬಂದೊಡನೆ ಏನು ಮಾಡಬೇಕು?:** ಗರುಡಪುರಾಣದಲ್ಲಿಯೂ ಈ ಬಗ್ಗೆ ವಿಹಿತ ಅಂಶಗಳಿವೆ:

1. ದೇಹಿಯ ಮರಣ ಸಂಭವಿಸಿದ ಕೂಡಲೇ ಮನೆಯ ಮುಂದಿರುವ ತುಳಸಿಯ ಗಿಡದ ಮುಂದೆ ಆಕಳ ಸಗಣಿಯಿಂದ ಒಂದು ಮಂಡಲವನ್ನು ಮಾಡಬೇಕು. ಅಲ್ಲಿ ಎಳ್ಳನ್ನು ಸೂರೆ ಮಾಡಿ ದರ್ಭೆಯನ್ನು ಹರಡಬೇಕು. ಶುಭ್ರವಾದ ಆಸನವೊಂದನ್ನು ಮಾಡಿ, ಅದರ ಮೇಲೆ ಶಾಲಗ್ರಾಮ ಶಿಲೆಯನ್ನು ಸ್ಥಾಪಿಸಬೇಕು. ಶಾಲಗ್ರಾಮ ಶಿಲೆ ಇರುವಲ್ಲಿ ಪಾಪ, ದೋಷ, ಭಯ - ಇವಾವುದೂ ಸುಳಿಯುವುದಿಲ್ಲ. ತುಳಸೀಗಿಡದ ನೆರಳಿನಲ್ಲಿ ಅಂದರೆ ಸನಿಹದಲ್ಲಿ ಮೃತನಾದವನಿಗೆ ಅಪೂರ್ವ ದಾನ ಮಾಡಿದಂತಹವನಿಗೆ ದೊರಕುವ ಪುಣ್ಯವು ಲಭ್ಯವಾಗುತ್ತದೆ. ಯಮದೂತರು ತುಳಸಿ ಬಳಿ ಬರಲು ಬೆದರುತ್ತಾರೆ. ಮೃತನಿಗೆ, ಹಿಂಸೆ, ನೋವು ಪ್ರಾಪ್ತವಾಗುವುದಿಲ್ಲ. ಎಳ್ಳು, ದರ್ಭೆ, ತುಳಸೀದಳಗಳು ಮೃತನಿಗೆ ಸದ್ಗತಿದಾಯಕ ವಾದದ್ದು.
2. ಹಸುವಿನ ಸಗಣಿಯಿಂದ ನೆಲವನ್ನು ಸಾರಿಸಿ, ದರ್ಭೆಗಳನ್ನು ಹರಡಿ, ಸಂಸ್ಕರಿಸಿ ಮರಣೋನ್ಮುಖನಾದವನನ್ನು ಅಥವಾ ದೇಹಿಯನ್ನು (ಶವ) ಪೀಠೋಪಕರಣಗಳ ಮೇಲೆ ಮಲಗಿಸದೆ, ಸಾರಿಸಿದ ನೆಲದ ಮೇಲೆಯೇ ದಕ್ಷಿಣ ಮುಖವಾಗಿ ಮಲಗಿಸಬೇಕು. ಸಾರಿಸಿ ನೆಲದ ಮೇಲೆ ಹಾಕಿದ ಮಂಡಲದಲ್ಲಿ ದೇವತೆಗಳೊಡನೆ ತ್ರಿಮೂರ್ತಿಗಳೂ ಬಂದು ನೆಲೆಸಿರುತ್ತಾರೆ. ಮರಣೋನ್ಮುಖನಾದವನಿಗೆ ಗಂಗಾ ಜಲವನ್ನು ಶಾಲಗ್ರಾಮ ಶಿಲೆಯಿಂದ ಪವಿತ್ರವಾದ ನೀರಿನ ಹನಿಗಳನ್ನು ಬಿಡಬೇಕು. ಉತ್ಕ್ರಮಣ ಸಮಯದಲ್ಲಿ ಗಂಗಾ, ಗಂಗಾ ಎಂಬುದಾಗಿ ಧ್ಯಾನಿಸಬೇಕು. ಪುಣ್ಯಪುರುಷರ ಪ್ರಾಣವು ಅಪಾನದಿಂದ ಬಿಡುಗಡೆಯಾದ ಕೂಡಲೇ ಬಾಯಿ, ಕಣ್ಣು ಮೂಗಿನ ಹೊರಳೆಗಳು, ಕಿವಿಗಳು ಈ ಏಳುದ್ವಾರಗಳ ಮೂಲಕ ಜೀವವು ದೇಹವನ್ನು ತೊರೆಯುತ್ತದೆ. ಆಗ ದೇಹವು ನಿರಾಧಾರವಾಗಿ, ಬೇರಿಲ್ಲದ ವೃಕ್ಷದಂತೆ ಕೆಳಗೆ ಬೀಳುತ್ತದೆ. ಇದು ಉತ್ಕ್ರಮಣ ಕಾಲದಲ್ಲಿ ಅನುಸರಿಸುವಂತಹ ಕ್ರಮ.

3. ಜ್ಞಾತಿ, ಬಂಧು, ಮಿತ್ರರಿಗೆ ಮರಣವಾರ್ತೆಯನ್ನು ತಿಳಿಸುವುದು. ಇದಕ್ಕೆ ಒಬ್ಬನೇ ಓಡಾಡುವ ಬದಲು ಹತ್ತಿರದ ಸಂಬಂಧಿಗಳಿಗೆ ಇಂತಿಂತಹವರು ಎಂದು ತಿಳಿಸಿ (ಈಗಿನ ಕಾಲದಲ್ಲಿ ದೂರವಾಣಿ ಸೌಕರ್ಯವೂ ಇರುವುದರಿಂದ) ಅವರಿಗೆ ಸುದ್ದಿ ಮುಟ್ಟಿಸುವಂತೆ ಹೇಳಿಕೊಳ್ಳಬೇಕು. ಎಲ್ಲಕ್ಕೂ ಒಬ್ಬನೇ ಓಡಾಡಬಾರದು.
4. ಮನೆಯ ಮುಂದೆ ದಾರಿಗಡ್ಡಲಾಗದಂತೆ ಒಂದು ಕಡೆಯಲ್ಲಿ ಅಗ್ನಿಯನ್ನು ಸ್ಥಾಪಿಸುವುದು. ಅದು ಉರಿಯುತ್ತಿರುವಂತೆ, ಆರದಂತೆ ನೋಡಿಕೊಳ್ಳುವುದು.
5. ಪುರೋಹಿತರನ್ನು ತಕ್ಷಣವೇ ಗೊತ್ತುಪಡಿಸಿಕೊಳ್ಳುವುದು. ಬಂಧುಗಳ ನೆರವು ಪಡೆಯುವುದು.
6. ಅಪಘಾತ, ಆಕಸ್ಮಿಕ, ಅಸಹಜ ಮರಣವಾದರೆ ಪೋಲೀಸರಿಗೆ ದೂರು ಕೊಡುವುದು.
7. ಪುರೋಹಿತರನ್ನು, ಹಿರಿಯರನ್ನು ಕೇಳಿ ಉಪಯುಕ್ತ ಸಾಮಾನಿನ ಸಿದ್ಧತೆ ಮಾಡಿಕೊಳ್ಳುವುದು. ಪುರೋಹಿತರ ಸಲಹೆ ಪಡೆದು ಶವ ವಾಹನ - ವಾಹಕರನ್ನು ಎಷ್ಟು ಹೊತ್ತಿಗೆ ಬರಬೇಕೆಂದು ಹೇಳುವುದು. ಇವೆಲ್ಲ ಕೆಲಸಗಳನ್ನು ಮಿತ್ರರು ಬಂಧುಗಳಿಗೆ ವಹಿಸಿ, ಕರ್ತನು ಸ್ಥಿಮಿತ ಮನಸ್ಸಿನಿಂದ ಪುರೋಹಿತರೊಂದಿಗೆ ಇರಬೇಕು.
8. ವೈದ್ಯರಿಂದ ಮರಣಕಾರಣಪತ್ರ ಪಡೆಯುವುದು - ಇದು ಬಹಳ ಮುಖ್ಯವಾದದ್ದು.
9. ಮೊದಲ ದಿನ ಗೃಹದಲ್ಲಿ ಒಲೆ ಹಚ್ಚಬಾರದು. ಬಂಧುಗಳು ಊಟ ತಿಂಡಿ ತರಬೇಕು.
10. ಬಂದವರ ಎದುರಿಗೆಲ್ಲಾ ಉಮ್ಮಳಿಸಿ ಶೋಕ ಪಡಬಾರದು. ತಡೆದುಕೊಂಡು ಆಗಬೇಕಾದ ಕೆಲಸಗಳ ಬಗ್ಗೆ ಹೆಚ್ಚು ಶ್ರಮಿಸಬೇಕು. ಕರ್ತನ ಹಣಕಾಸಿನ ಅನುಕೂಲವನ್ನು ಮೊದಲೇ ತಿಳಿದ ಬಂಧುಗಳು ನಿರ್ವಂಚನೆಯಿಂದ ಯಥಾಶಕ್ತಿ ನೆರವಾಗಬೇಕು. ಇದು ಪುಣ್ಯಪ್ರದವಾದುದು ಮತ್ತು ಮಾನವನಾದವನು ನಿರ್ಮೋಹನಾಗಿ ಮಾಡಬೇಕಾದ ಕರ್ತವ್ಯ.
11. ಮಾತಾಪಿತೃ ವಿಯೋಗದಲ್ಲಿ ಮಕ್ಕಳ (ಕರ್ತ) ಕ್ಷೌರ ಅಗತ್ಯ. ರಾತ್ರಿ ಆಗದಿದ್ದರೆ ಮರುದಿನ ಮಾಡಿಕೊಳ್ಳಬೇಕು.
12. ಮಕ್ಕಳು ಚಟ್ಟ ಹೊರುವಾಗ ಹೆಗಲು ಕೊಡಬೇಕು. ಆ ರೀತಿ ಹೆಗಲು ಕೊಟ್ಟರೆ ಪ್ರತಿ ಹೆಜ್ಜೆಯೂ ಅಶ್ವಮೇಧಯಾಗಕ್ಕೆ ಸರಿಸಮವೆಂದು ಸ್ಮೃತಿಕಾರರು ಹೊಗಳುತ್ತಾರೆ. (ತಾನು ಚಿಕ್ಕಮಗುವಾಗಿದ್ದಾಗ ಎತ್ತಿ ಆಡಿಸಿ ಹೆಗಲ ಮೇಲೆ ಕೂರಿಸಿಕೊಂಡು ಓಡಾಡಿದ ಕರುಣಾಮೂರ್ತಿಯಾದ ತಂದೆಯನ್ನು ತಾಯಿಯನ್ನು ಅಂತಿಮಕಾಲದಲ್ಲಿ ಹೀಗೆ ಹೆಗಲ ಮೇಲೆ ಹೊರುವುದು ಇಹಪರಗಳ ಪುಣ್ಯವರ್ಧಕ).
13. ಹತ್ತು ದಿನಗಳ ಪರ್ಯಂತ ಮೃತಸ್ಥಳದಲ್ಲಿ ದಕ್ಷಿಣಮುಖವಾಗಿ ದೀಪ ಹತ್ತಿಸಿ ಪಾತ್ರೆಯಲ್ಲಿ ನೀರಿಡಬೇಕು. ಮಧ್ಯಾಹ್ನದ ವೇಳೆ ಕರ್ತೃಗಳಲ್ಲೊಬ್ಬರು ಒಂದು ಮುಷ್ಟಿ ಅನ್ನ ತವ್ವೆಯನ್ನು ಕಾಗೆಗಳಿಗೆ ಬಲಿಯನ್ನಾಗಿ ಕೊಡಬೇಕು.
14. ಬಂಧುಮಿತ್ರರೊಂದಿಗೆ ಗರುಡಪುರಾಣವನ್ನು ಕೇಳಬೇಕು. ಕರ್ತೃಗಳು ನಡೆದುಕೊಳ್ಳಬೇಕಾದ ರೀತಿಯನ್ನು ಪುರೋಹಿತರನ್ನು ಕೇಳಿ ತಿಳಿಯಬಹುದು. ಇವು ಕರ್ತೃವು ಮತ್ತು ಹತ್ತಿರದ ಬಂಧುಗಳು ಅವಶ್ಯಕವಾಗಿ ತಿಳಿದುಕೊಂಡು ಒಬ್ಬೊಬ್ಬರು ಒಂದೊಂದು ಕೆಲಸವನ್ನು ಹಂಚಿಕೊಂಡು ಮಾಡುವುದಾಗಿದೆ. ಕರ್ತೃಗಳು ಸಂಕಟ, ದುಃಖದ ಸಮಯದಲ್ಲಿರುವಾಗ, ದುಃಖವನ್ನು ಸಹ ಹಂಚಿಕೊಳ್ಳಲು ಇದು ಅವಶ್ಯ ಸಮಯವೂ ಆಗಿರುತ್ತದೆ.

**ಕರ್ಮಕ್ರಿಯೆಗಳು:** ಮರಣ ಸಂಭವಿಸಿದ ಕೂಡಲೇ ಅನುಸರಿಸಬೇಕಾದ ಕೆಲಸಗಳನ್ನು ತಿಳಿದಿದ್ದಾಗಿದೆ. ಶವಕ್ಕೆ ಸ್ನಾನ ಮಾಡಿಸಿ ಹಣೆಗೆ ತಿಲಕವನ್ನಿಡುವುದೂ ಪದ್ಧತಿ, ಗೋಭಿಲಸ್ಮೃತಿಯು ಹೀಗೆ ಹೇಳುತ್ತದೆ (23, 25) ಶವವನ್ನು ನಗ್ನವಾಗಿ ದಹಿಸಬಾರದು. ಅದನ್ನು ಬಟ್ಟೆಯಿಂದ ಹೊದಿಸಿ, ಗಂಧಾದಿಗಳಿಂದ ಲೇಪಿಸಿ, ಹೂವುಗಳಿಂದ ಧರಿಸಬೇಕು ಎಂದು ಹೇಳುತ್ತದೆ. ನಿತ್ಯಾನಂದರು ಬರೆದ ಅಂತ್ಯಕರ್ಮದೀಪಿಕಾ ಎನ್ನುವ ಗ್ರಂಥದಲ್ಲಿ ಶವಕ್ಕೆ ಹೂಮಾಲೆಯನ್ನು ಹೇರಳವಾಗಿ ಹಾಕಬೇಕು. ತುಳಸಿಮಾಲೆಯನ್ನು ಹಾಕಬೇಕು, ಯಜ್ಞೋಪವೀತ, ಗೋಪೀಚಂದನವನ್ನು ಹಾಕಬೇಕು ಎಂದು ಹೇಳಿದೆ. ಕರ್ತೃವು ಉಡಲು, ಹೊದೆಯಲು ಹೊಸ ಬಿಳಿಬಟ್ಟೆಯನ್ನು, ಶವಕ್ಕಾಗಿ ಅಂಚು, ಸೆರಗು ಇಲ್ಲದ ಬಿಳಿಬಟ್ಟೆಯನ್ನು ತರಬೇಕು. ಶವದ ಬಟ್ಟೆಯಲ್ಲಿ ಸ್ವಲ್ಪ ಹರಿದುಕೊಂಡು, ಮುಂದಿನ ಕರ್ಮಗಳಲ್ಲಿ ವಾಸಸ್ಸಿಗಾಗಿ ಬಳಸಬೇಕು.

ಶವದ ಬಟ್ಟೆಯಿಂದ ಹೀಗೆ ತೆಗೆದುಕೊಂಡ ವಾಸಸ್ಸು ಮುಂದಿನ ವಿಧಿಗಳಲ್ಲಿ ವಾಸೋದಕಕ್ಕೆ ಮೀಸಲು. ಕರ್ತೃಗಳು ಅವರವರ ಬಟ್ಟೆ ಅವರವರ ಜಲಪಾತ್ರೆಗಳನ್ನು ಅವರವರೇ ಉಪಯೋಗಿಸಬೇಕು. ಎಲ್ಲೆಂದರಲ್ಲಿ ಇಡದೆ ಕರ್ಮಾಂತ್ಯದವರೆಗೆ ನಿಶ್ಚಿತ ಜಾಗದಲ್ಲಿಟ್ಟುಕೊಳ್ಳಬೇಕು.

**ಅಭಿಶಿಂಚನ :** ಶವಕ್ಕೆ ಅಂಚು ಸೆರಗು ಇಲ್ಲದ ಬಿಳಿಬಟ್ಟೆಯನ್ನು ಉಡಿಸುತ್ತಾ ಹೇಳುವ ಮಂತ್ರದ ಭಾವಾರ್ಥವು ಹೀಗಿರುತ್ತದೆ. "ನೀನು ಧರಿಸಿರುವ ವಸ್ತ್ರಗಳನ್ನು ಕಳಚಿಹಾಕು. ನೀನು ಮಾಡಿರುವಂತಹ ದಾನಗಳನ್ನು ಸ್ಮರಣೆ ಮಾಡಿಕೊ, ಬ್ರಾಹ್ಮಣಾದಿಗಳಿಗೆ ನೀಡಿರುವ ದಕ್ಷಿಣೆಗಳನ್ನು ನೆನಪು ಮಾಡಿಕೋ. ಮಿತ್ರರಿಗೆ ನೀಡಿರುವ ಉಡುಗೊರೆ, ಕಾಣಿಕೆಗಳನ್ನು ಸ್ಮರಣೆ ಮಾಡಿಕೋ. ತತ್‌ಫಲವಾಗಿ ನಿನಗೆ ಬರುವ ಪುಣ್ಯಗಳಲ್ಲಿ ಈ ಹೊಸವಸ್ತ್ರಧಾರಣೆಯು ಮೊದಲನೆಯ ದಾಗಿರುತ್ತದೆ. (ಇದು ಜನಪದದಲ್ಲಿ ಕೊಟ್ಟಿದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ ಎನ್ನುವ ಗಾದೆಯನ್ನು ನೆನಪಿಗೆ ತರುವುದು)

ಬಳಿಕ ಶವವನ್ನು ಔದುಂಬರದ ಕೋಲುಕಡ್ಡಿಗಳಿಂದ ಮಾಡಿದ ಚಟ್ಟದ ಮೇಲೆ ದಕ್ಷಿಣಕ್ಕೆ ತಲೆಯು ಬರುವಂತೆ ಮಲಗಿಸಬೇಕು. ಈಗಿನ ಕಾಲದಲ್ಲಿ ಬೊಂಬಿನಿಂದಲೇ ಚಟ್ಟವನ್ನು ಮಾಡುತ್ತಾರೆ. ಗೃಹ್ಯಸೂತ್ರಗಳನ್ನು ಬರೆದ ಮೂರು ಸಾವಿರ ವರ್ಷದಷ್ಟು ಹಿಂದಿನ ಕಾಲದಲ್ಲಿ ಸ್ಮಶಾನಕ್ಕೆ ಶವವನ್ನು ಎತ್ತಿನಗಾಡಿಯಲ್ಲಿ ಕರೆದೊಯ್ಯುತ್ತಿದ್ದರೆಂದು ಹೇಳಲಾಗಿದೆ. ಆಗ ಹೇಳುತ್ತಿದ್ದ ಮಂತ್ರಾರ್ಥವಿದು: "ನಿನ್ನ ಅಂತಿಮ ಯಾತ್ರೆಗಾಗಿ ಎರಡು ಎತ್ತಿನಗಾಡಿಯನ್ನು ಸಿದ್ಧಪಡಿಸಿದ್ದೇವೆ. ಪುಣ್ಯಜೀವಿಗಳು ಪ್ರವೇಶಿಸುವ ಯಮಲೋಕಕ್ಕೆ ನೀನು ಸಜ್ಜಾಗು."

ಹಿರಿಯ ಮಗನೇ ಅಂತಿಮ ಯಾತ್ರೆಯ ಮುಂದಿರುತ್ತಾನೆ. ತನ್ನ ಕೈಲಿ ಗೃಹ್ಯಾಗ್ನಿಯಿಂದ ದೀಪಿತವಾದ ಅಗ್ನಿಯನ್ನು ಒಯ್ಯುತ್ತಾನೆ. ಮತ್ತೊಬ್ಬರು ಮಡಿಕೆಯಲ್ಲಿ ಅನ್ನವನ್ನು ಒಯ್ಯುತ್ತಾರೆ. ಒಯ್ಯುವ ಮಧ್ಯದಾರಿಯಲ್ಲಿ ಸ್ವಲ್ಪ ಸ್ವಲ್ಪ ಅನ್ನವನ್ನು ಅಲ್ಲಲ್ಲಿ ಇಡುತ್ತಾರೆ. ಮತ್ತೊಬ್ಬರು, ಸ್ಮಶಾನ ವಾಸಿಗಳಿಗೆ ಕೊಡಲು ವಸ್ತ್ರಗಳನ್ನು ಕೊಂಡೊಯ್ಯುತ್ತಾರೆ. ಈಗಿನ ಕಾಲದಲ್ಲಿ ಮಹಿಳೆಯರು ಸ್ಮಶಾನಕ್ಕೆ ಹೋಗುವುದಿಲ್ಲ. ಹಿಂದೆ ಹಾಗಿರಲಿಲ್ಲ. ಪಾರಸ್ಕರರು ಅಂತಿಮ ಯಾತ್ರೆಯಲ್ಲಿ ಎರಡು ವರ್ಷದ ಬಾಲಕರು ವಿನಃ ಎಲ್ಲರೂ ಸೇರಬೇಕು (ಪಾ.ಗೃ.ಸೂ.108) ಎಂದು ಹೇಳಿದ್ದಾರೆ.

ಅಂತಿಮ ಯಾತ್ರೆಯ ಸಮಯದಲ್ಲಿ ಹಿರಿಯ ಮಗನು ಹೇಳುವ ಮಂತ್ರದ ಭಾವಾರ್ಥ ಹೀಗಿರುತ್ತದೆ: ಸರ್ವಜ್ಞನಾದ, ವಿಶ್ವರಕ್ಷಕನಾದ ಪೂಷನು, ಈ ಲೋಕದಿಂದ ನಿನ್ನನ್ನು ಮತ್ತೊಂದೆಡೆಗೆ ಒಯ್ಯಲಿ, ಪಿತೃಗಳಿಗೆ ಸೇರಿಸಲಿ. ಅಗ್ನಿ ದೇವನು ನಿನ್ನನ್ನು ದೇವತೆಗಳಿಗೆ ಅರ್ಪಿಸಲಿ, ಪೂಷನೇ ಎಲ್ಲ ದಾರಿಗಳನ್ನು ಬಲ್ಲವನು. ಅವನು ನಿನ್ನನ್ನು ನಿರುಪಾಧಿಕವಾದ ದಾರಿಯಲ್ಲಿ ಕೊಂಡೊಯ್ಯಲಿ (ಖ).

ಅಂತ್ಯಸಂಸ್ಕಾರ ಯಾತ್ರೆಯಲ್ಲಿ ವಿಪ್ರರು ಯಮಸೂಕ್ತಗಳನ್ನು ಪಠಿಸುತ್ತಾರೆ. ಸ್ಮಶಾನಕ್ಕೆ ರುದ್ರಭೂಮಿಗೆ ಬಂದ ಮೇಲೆ ಕರ್ತೃವು ಕಾಲು ತೊಳೆದುಕೊಂಡು, ಆಚಮನ ಮಾಡಿ, ಮಂತ್ರವಿಲ್ಲದೆ ಶವದ ಅಂತ್ಯಕ್ರಿಯೆಗಳನ್ನು ಮಾಡುವುದಾಗಿ ಮನಸ್ಸು ಮಾಡಿಕೊಳ್ಳುತ್ತಾನೆ. (ಯಜ್ಞೋಪವೀತ) ಪ್ರಾಚೀನಾವೀತಿ ಮಾಡಿಕೊಳ್ಳುತ್ತಾನೆ. ಶವಭೂಮಿಗೆ ಶಮೀಪತ್ರದಿಂದ ಜಲಸೇಚನ ಮಾಡುತ್ತಾ ಅಲ್ಲಿರಬಹುದಾದ ಕ್ಷುದ್ರಶಕ್ತಿಗಳನ್ನು ಓಡಿಸುತ್ತಾನೆ. ಯಮನೂ, ಪಿತೃಗಳೂ ಈ ಸ್ಥಳವನ್ನು ನೀಡಿರುತ್ತಾರೆ ಎಂದು ಹೇಳಿ ಶವಭೂಮಿಯನ್ನು ಶುಚಿಗೊಳಿಸುತ್ತಾನೆ. ಬಳಿಕ ಶವಭೂಮಿಯಲ್ಲಿ ದರ್ಭೆಗಳಿಂದ ಮೂರು ಗೆರೆಗಳನ್ನೆಳೆಯುತ್ತಾನೆ. ಮಂತ್ರ ಪುರಸ್ಸರವಾಗಿ ನಾನು ಯಮನಿಗಾಗಿ ಒಂದು ಸಾಲು ಗೆರೆ ಹಾಕುತ್ತೇನೆ. ಕಾಲದೇವತೆಗೊಂದು ಸಾಲುಗೆರೆ ಹಾಕುತ್ತೇನೆ, ಮೃತ್ಯುದೇವತೆಯಾದ ಮೃತ್ಯುವಿಗೆ ಸಾಲುಗೆರೆಯನ್ನು ಹಾಕುತ್ತೇನೆ ಎಂಬುದಾಗಿ ಮೂರು ಬಾರಿ ಮಂತ್ರಪಠಣ ಮಾಡುತ್ತಾನೆ. ಅಲ್ಲಿಯೇ ಸಣ್ಣ ಗುಂಡಿಯನ್ನು ಮಾಡಿ ಅದರಲ್ಲಿ ತಿಲ ಹಾಗೂ ಸುವರ್ಣವನ್ನು ಹಾಕಿ ಜಲಮಿಶ್ರಿತ ಎಳ್ಳನ್ನು ಅಲ್ಲಿ ಪ್ರೋಕ್ಷಿಸುತ್ತಾನೆ. ಮಧ್ಯದಲ್ಲಿ ಯಮನಿಗಾಗಿ ಮಾಡಿದ ಸ್ಥಳವೇ ಇದು. ಶವದ ಬಾಯಿಗೆ ಎಳ್ಳನ್ನು ಹಾಕಿ, ಅದನ್ನು ಚಿತೆಯ ಮೇಲೆ ದಕ್ಷಿಣಮುಖವಾಗಿ ಮಲಗಿಸುತ್ತಾನೆ. ದಹನಕ್ಕೆ ಮುನ್ನ ಪ್ರೇತದ ಎರಡು ಕೈಗಳಿಗೂ ಎರಡೆರಡು ಪ್ರೇತಪಿಂಡಗಳನ್ನು ಇಡಬೇಕು. ಮೃತನೂ ಸೇರಿ ಐದು ಪಿಂಡಗಳು ಆದಾಗಲೇ ಅದು ದಹನಕ್ಕೆ ಅರ್ಹವಾಗುತ್ತದೆ. ಬಳಿಕ ಚಿತಾಗ್ನಿಯಿಂದ ಮೊದಲು ತಲೆಯ ಕಡೆಯಿಂದ (ಹೆಂಗಸಾದರೆ ಕಾಲಿನ ಕಡೆಯಿಂದ) ಚಿತಾಗ್ನಿಯನ್ನು ಹಚ್ಚುತ್ತಾನೆ. ಹೇ ಅಗ್ನಿಯೇ! ಎಲ್ಲ ಪಾಪದೋಷಗಳನ್ನು ಭಸ್ಮ ಮಾಡುವ ದೇವನೇ, ಯಮಲೋಕಕ್ಕೆ ಈ ಶವವನ್ನು - ಹವಿಸ್ಸನ್ನು ಕೊಂಡೊಯ್ದು ದೇವತೆಗಳಿಗೆ ಅರ್ಪಿಸು ಎಂದು ಯಜ್ಞ ಮಾಡುತ್ತಾನೆ. ಶವಸಂಸ್ಕಾರವೂ ಸಹ ಯಜ್ಞರೂಪವೆಂದು ಭಾವಿಸಿ ಶವವನ್ನೇ ಹವಿಸ್ಸನ್ನಾಗಿ ಅರ್ಪಿಸುವ

ಭಾವನೆಯು ಸಾವನ್ನೂ ಪವಿತ್ರೀಕರಿಸುವ ಕ್ರಿಯೆಯಾಗಿ ಪರಿಣಮಿಸುತ್ತದೆ.

**ವೇದಗಳಲ್ಲಿ ಅಪರಕ್ರಿಯೆಗಳ ವಿಚಾರ:** ಗೃಹ್ಯಸೂತ್ರಗಳಲ್ಲಿ ಸತಿಗಳಲ್ಲಿ ಮರಣಾನಂತರ ವಿಧಿಗಳು ಸಂಸ್ಕಾರ ಕ್ರಿಯೆಯಾಗಿ, ಮಹತ್ವಪೂರ್ಣವಾಗಿ ತಿಳಿಸಲ್ಪಟ್ಟಿವೆ. ನಾವು ಪಾಲಿಸುತ್ತಿರುವುದು ಇದೇ ಕ್ರಮಗಳನ್ನೇ, ಇನ್ನೂ ಹಿಂದಕ್ಕೆ ವೇದಗಳ ಕಾಲದಲ್ಲಿ ಔರ್ಧ್ವದೈಹಿಕ ಕ್ರಮಗಳನ್ನು ವೇದಗಳು ಹೇಳಿವೆ. ಋಕ್ಸಂಹಿತೆಯ ಹತ್ತನೆಯ ಮಂಡಲದಲ್ಲಿ ಇವು ಪ್ರಸ್ತಾಪಿಸಲ್ಪಟ್ಟಿವೆ. ಇವುಗಳಲ್ಲಿ ಕೆಲವು ಋಕ್ಕುಗಳನ್ನು ಪಿತೃಮೇಧದಲ್ಲೂ ಪಿತೃತರ್ಪಣದಲ್ಲಿಯೂ ಬಳಸುತ್ತಾರೆ. ಮರಣದ ಅನಂತರವೂ ಮನುಷ್ಯನ ಜೀವಿತವು ಅವನವನ ಕರ್ಮಫಲವಾಗಿ ಮರುಕಳಿಸುವುದೆಂಬುದರ ಕಲ್ಪನೆಯನ್ನು ಅವು ಒಪ್ಪುತ್ತವೆ. ಸ್ವರ್ಗಲೋಕದ ಬಯಕೆ ಎಂದರೆ ಹುಟ್ಟುಸಾವಿನಿಂದ ಬಿಡುಗಡೆಯಾಗುವುದನ್ನು ಅದು ಹಂಬಲಿಸುತ್ತದೆ. ಸ್ವರ್ಗಲೋಕಕ್ಕೆ ವ್ಯತಿರಿಕ್ತವಾದುದು ನರಕಲೋಕ ಎಂಬುದನ್ನು ಅಥರ್ವವೇದವು ಹೇಳುತ್ತದೆ. ಶತಪಥ ಬ್ರಾಹ್ಮಣದಲ್ಲಿ ಚಿತ್ರಹಿಂಸೆಗಳ ವಿವರ ಕಂಡುಬರುತ್ತದೆ.

ನಾವೀಗ ಅಂತ್ಯೇಷ್ಟಿಯನ್ನು ವಿಚಾರ ಮಾಡುತ್ತಿರುವುದರಿಂದ ವೇದಗಳು ಈ ಬಗ್ಗೆ ಹೇಳುವ ಅಭಿಪ್ರಾಯಗಳನ್ನು ತಿಳಿದುಕೊಂಡರೆ, ಪುರಾತನ ಋಷಿಮುನಿಗಳು ಈ ಬಗ್ಗೆ ಹೇಗೆ ಉಗ್ಗಡಿಸಿದರೆಂಬುದು ಅರ್ಥವಾಗುತ್ತದೆ. ಮರಣವು ಜೀವಿಯ ಸ್ವಾಭಾವಿಕ ಪ್ರಕ್ರಿಯೆಯೆಂಬುದನ್ನು ಮನಗಂಡ ಋಷಿಗಳು, ಮಾನವನಿಗೆ ಅಂತಹ ಸ್ಥಿತಿಯಲ್ಲಿಯೂ ಅನುಪಮವಾದ ಕರುಣೆ, ವಾತ್ಸಲ್ಯಗಳನ್ನು ತೋರಿಸುತ್ತಾ ಬದುಕನ್ನು, ಸಾವನ್ನು - ಎರಡನ್ನೂ ಸಹ್ಯವನ್ನಾಗಿ ಮಾಡಲು ಯತ್ನಿಸಿದರು ಎಂಬುದು ಗೋಚರವಾಗುತ್ತದೆ.

ಸದ್ಗತಿಗೆ ಹಂಬಲ : ಪ್ರೇತಗಳನ್ನು ಕುರಿತ ಸೂಕ್ತವು ಮರಣಿಸಿದವನಿಗೆ ಸದ್ಗತಿ ದೊರೆಯಲೆಂಬ ಉತ್ಕಟಾಕಾಂಕ್ಷೆಯಿಂದ ಕೂಡಿರುವುದು ಋಗ್ವೇದದಲ್ಲಿ ಕಂಡುಬರುತ್ತವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ನೋಡಿ.

"ಎಲೈ ಪ್ರೇತವೇ! ಪಿತೃಗಳೊಡನೆ ಕೂಡಿಕೋ. ಯಮನೊಡನೆ ಕೂಡಿಕೋ, ಅತ್ಯುಚ್ಚಲೋಕದಲ್ಲಿ ನಿನ್ನ ಆಸೆಗಳು ಈಡೇರಲಿ. ಇಲ್ಲಿನ ಕೊರತೆಗಳನ್ನು ದೂಡಿ, ನಿನ್ನ ತವರಿಗೆ ಹೋಗಿ ಜ್ಯೋತಿರ್ಮಯ ಲೋಕವನ್ನು ಹೊಂದು (ಸುಕೃತ ಫಲವನ್ನು ಅನುಭವಿಸಲು ಯೋಗ್ಯ ಶರೀರವನ್ನು ಸೇರಿಕೊ ಎಂದರ್ಥ)."

"ಎಲೈ ಪ್ರೇತವೇ! ನಿನ್ನ ಚಕ್ಷುರಿಂದ್ರಿಯವು ಸೂರ್ಯನಲ್ಲಿ ಸೇರಲಿ, ನಿನ್ನ ಪ್ರಾಣವು ವಾಯುವಿನಲ್ಲಿ ಸೇರಲಿ. ನಿನ್ನ ಕರ್ಮಫಲಾನುಸಾರ ದ್ಯುಲೋಕವನ್ನಾದರೂ, ಪೃಥ್ವಿಯನ್ನಾದರೂ ಸೇರು. ನಿನಗೆ ಹೊಂದಿಕೆ ಆಗುವಂತಿದ್ದರೆ ಜಲವನ್ನು ಅಥವಾ ಔಷಧಿ ರೂಪವಾದ ಅವಯವಗಳೊಂದಿಗೆ ಸೇರು (163)"

ಮೃತನಿಗೆ ಸದ್ಗತಿ, ಪುಣ್ಯಧಾಮಗಳೂ ದೊರಕಲೆಂಬ ಆಕಾಂಕ್ಷೆ ಇಲ್ಲಿ ಕಾಣಿಸುತ್ತದೆ: "ಎಲೈ ಪ್ರೇತವೆ! ಪಿತೃಗಳಲ್ಲಿ ಕೆಲವರಿಗೆ ಉಪಭೋಗವಾದ ಸೋಮವು ದೊರೆಯುತ್ತದೆ. ಕೆಲವರು ಘೃತವನ್ನು ಸೇವಿಸುವರು. ಕೆಲವರಿಗೆ ಮಧುವು ಭರದಿಂದ ಹರಿದುಬರುವುದು, ಎಲೈ ಪ್ರೇತವೇ! ಪುಣ್ಯಶಾಲಿಗಳಾದ ಪಿತೃಗಳನ್ನು ಸೇರು."

ಮತ್ತೊಂದು ಮಂತ್ರವು "ಎಲೈ ಪ್ರೇತವೇ! ಈ ಲೋಕದಲ್ಲಿದ್ದಾಗ ಯಾರು ತಮ್ಮ ತಪಃಶಕ್ತಿಯಿಂದ ಪಾಪದೂರವಾಗಿ ಸದ್ಗತಿಯನ್ನು ಹೊಂದಿದರೋ, ಮತ್ತಾರು ತಮ ತಪಃ ಪ್ರಭಾವದಿಂದ ಸ್ವರ್ಗಲೋಕ ಹೊಂದಿದರೋ ಮತ್ತೆ ದುಸ್ಸಾಧ್ಯವಾದ ತಪಸ್ಸನ್ನು ಮಾಡಿದರೋ ಅಂತಹ ಪಿತೃಗಳ ಬಳಿಗೆ ಹೋಗಿ ಸೇರು" ಎನ್ನುತ್ತದೆ. ಪ್ರೇತಾಧಿಪನಾದ, ಪಿತೃಲೋಕಾಧಿಪತಿಯಾದ ಯಮನು ಪ್ರಾಣಿಗಳ ಸಕಲ ಕರ್ಮಗಳನ್ನು ದಿಟ್ಟಿಸುತ್ತಿರುವವನು ಎಂಬ ಮಾತೂ ಇಲ್ಲಿ ಕಂಡುಬರುತ್ತದೆ. ಸುಕೃತ ದುಷ್ಕೃತಗಳ ಫಲಾನುಭವ, ಕರ್ಮ, ಪುನರ್ಜನ್ಮ ತತ್ವಾಂಶಗಳ ಧ್ವನಿಯು ಇಲ್ಲೆಲ್ಲಾ ವಿಶೇಷವಾಗಿ ಕಂಡುಬರುತ್ತದೆ.

**ಶವಸಂಸ್ಕಾರ – ವೇದಗಳ ಅಭಿಪ್ರಾಯ:** ಸತ್ತಮೇಲೆ ಶವವನ್ನು ಹೂಳುವುದು, ಸುಡುವುದು ಎರಡೂ ಪದ್ಧತಿಯು ಹಿಂದಿನ ಕಾಲದಲ್ಲಿ ರೂಢಿಯಲ್ಲಿ ಇದ್ದಂತೆ ಕಂಡುಬರುತ್ತದೆ. ಶವವನ್ನು ಸುಟ್ಟಮೇಲೆ ಅಸ್ಥಿಗಳನ್ನು ಹೂತು ಕಾಪಾಡುವ ಪದ್ಧತಿಯೂ ಇದ್ದಿತು. ಕುಂಡದಲ್ಲೂ ಅವುಗಳನ್ನು ಕಾಪಾಡುವ ಪದ್ಧತಿಯು ಇದ್ದಿತು ಎಂಬುದು ಋಗ್ವೇದದಲ್ಲಿ ಕಾಣಿಸುತ್ತದೆ. (16,18, 1013)

ಸತ್ತವನ ದೇಹವನ್ನು "ಹೇ ಅಗ್ನಿಯೇ! ಪೂರ್ತಿ ಬೆಂದು ಬೂದಿಯಾಗುವಂತೆ ಸುಡಬೇಡ (16.1) ಎಂದು ಪ್ರಾರ್ಥಿಸಲಾಗಿದೆ. ಅಸ್ಥಿಯು ದೊರಕಲಿ ಎನ್ನುವ ಆಕಾಂಕ್ಷೆ. ಈ ಲೋಕವನ್ನು ತ್ಯಜಿಸಿದವನನ್ನು ಪಿತೃಗಳ ಎಡೆಗೆ ಬೇರೆ ಲೋಕಕ್ಕೆ ದಹನದ ಮೂಲಕ ಅಗ್ನಿಯು ಒಯ್ಯುವನು. (1614)"

ಈ ಮಂತ್ರಗಳಲ್ಲಿ ಶವವನ್ನು ಹೂಳುವ ಪದ್ಧತಿ ಇದೆಯೆಂದು ಸಮರ್ಥಿಸುತ್ತಾರೆ. "ಎಲೈ ಪ್ರೇತವೇ! ನೀನು ಈ ಭೂಮಿತಾಯಿಯ ಬಳಿಗೆ ಹೋಗು, ವಿಶಾಲವಾದ ಎಲ್ಲರಿಗೂ ಸುಖಪ್ರದವಾದ ಈ ಭೂಮಿಯನ್ನು ಸೇರು. ಈ ಪೃಥ್ವಿ ನಿನ್ನನ್ನು ಮೃತ್ಯುವಿನ ಸಂಪರ್ಕದಿಂದ ರಕ್ಷಿಸಲಿ. (18.10)"

"ಹೇ ಪೃಥಿವಿ! ಇವನಿಗೆ ಉಸಿರಾಡಲು ಅಡಚಣೆ ಇಲ್ಲದಂತೆ ಮಾಡು. ಇವನನ್ನು ಪೀಡಿಸಬೇಡ. ಅತಿಶಯವಾಗಿ ಸುಖಗೊಳಿಸು. ಇವನಿಗೆ ಉತ್ತಮ ಆಶ್ರಯದಾತೆಯಾಗು. ತಾಯಿ ತನ್ನ ಮಗುವನ್ನು ಸೀರೆಯ ಸೆರಗಿನಿಂದ ಹೊದ್ದಿಸುವಂತೆ ಇವನನ್ನು ಮರೆಮಾಡು. (18.11)"

"ಇವನ ಮೇಲೆ ಹರಡಿದ ಮಣ್ಣು ಹಗುರವಾಗಿರಲಿ. ಸಾವಿರಾರು ಧೂಳುಕಣಗಳು ಇವನನ್ನು ಸುತ್ತುವರೆದಿರಲಿ. ಈ ರೇಣುಗಳು ಮೃತನಿಗೆ ಸದಾಕಾಲ ಆಶ್ರಯಗಳಾಗಿಯೂ, ಘೃತಸ್ರಾವಿಗಳಾಗಿಯೂ ಆಗಿರಲಿ. (18-12)"

ಪಿತೃಸೂಕ್ತಗಳಲ್ಲಿ ಮೃತನ ಬಗ್ಗೆ ಬಂಧುಗಳ ಪ್ರೇಮದ ಹಾರೈಕೆಗಳು ಆರ್ದ್ರವಾಗಿದೆ. ಅವುಗಳನ್ನು ಗಮನಿಸಿ.

"ಎಲೈ ಅಗ್ನಿಯೇ! ಈ ಪ್ರೇತನನ್ನು ಸುಟ್ಟು ಭಸ್ಮ ಮಾಡಬೇಡ. ಇವನನ್ನು ಸಂತಾಪಗೊಳಿಸಬೇಡ. ಇವನ ಚರ್ಮಗಳನ್ನಾಗಲೀ, ಅಂಗಗಳನ್ನಾಗಲೀ ಚದುರಿಸಬೇಡ. ಜಾತವೇದಾಗ್ನಿಯೇ! ಇವನ ಮೈಯನ್ನು ಪಕ್ವಗೊಳಿಸಿದ ಒಡನೆಯೇ ಈ ಪ್ರೇತವನ್ನು ಪಿತೃಗಳಲ್ಲಿಗೆ ಕಳುಹಿಸಿಕೊಡು. (16ನೇ ಸೂಕ್ತ)"

"ಎಲೈ ಅಗ್ನಿಯೇ! ನಿನ್ನ ಮಂಗಳಕರ ರೂಪದಿಂದ ಈ ಪ್ರೇತವನ್ನು ಸುಕೃತಿಗಳ ಲೋಕಕ್ಕೆ ಸೇರಿಸು."

**ಔರ್ಧ್ವದೈಹಿಕ ಸೂಕ್ತಗಳ ಸಾರಾಂಶ :** ಸಂಹಿತೆಗಳು ಸಾವು ಎಂಬ ಅನಿವಾರ್ಯತೆಯಲ್ಲಿಯೂ ಮಾನವನ ಸುಖಕ್ಕಾಗಿ ದೇವತೆಗಳನ್ನು ಬೇಡಿಕೊಳ್ಳುವ ಸ್ತುತಿಗಳು, ಬದುಕಿನ ಬಗ್ಗೆ ಅವರಿಗಿರುವ ಅನ್ಯಾದೃಶ ಪ್ರೇಮವನ್ನೂ, ಬದುಕಿರುವಾಗಲೇ ಎಲ್ಲ ಸುಖಗಳ ಜತೆಗೆ ಅಸಾಮಾನ್ಯವಾದ ತ್ಯಾಗಜೀವನ, ಪಂಚಭೂತ ತೃಪ್ತಿ ಮತ್ತು ಲೋಕಕಲ್ಯಾಣವನ್ನು ಸಾಧಿಸಿ, ಬದುಕಿನ ಪರಿಪೂರ್ಣತೆಯನ್ನು ಸಾಧಿಸಬೇಕೆಂಬ ಅದಮ್ಯವಾದ ಹಂಬಲ ಎದ್ದು ಎದ್ದು ಕಾಣಿಸುತ್ತದೆ. ಅವು ಔರ್ಧ್ವದೈಹಿಕ ಸೂಕ್ತಗಳಲ್ಲೂ ಒಳಧ್ವನಿಗಳಾಗಿ ನಿಂತಿವೆ. ಸಂಹಿತೆಗಳ ಔರ್ಧ್ವದೈಹಿಕ ಸೂಕ್ತಗಳ ಒಟ್ಟುಸಾರಾಂಶವು ಹೀಗೆ ಗೋಚರವಾಗುತ್ತದೆ:

1. ಸ್ಮಶಾನಕ್ಕೆ ಸತ್ತವನ ಬಂಧುಗಳೆಲ್ಲರೂ ಹೋಗುತ್ತಿದ್ದರು (ಹೆಂಗಸರೂ ಸಹ) ಸತ್ತವನ ದೇಹವನ್ನು ಹೂಳುತ್ತಿದ್ದರು, ಸುಡುತ್ತಿದ್ದರು. ಶವದ ಅಸ್ಥಿಗಳನ್ನು ಮಾತ್ರ ಜೋಪಾನ ಮಾಡುತ್ತಿದ್ದರು. ಸಹಗಮನವನ್ನು ಸಾಂಕೇತಿಕವಾಗಿ ಆಚರಿಸುತ್ತಿದ್ದರು. ಚಿತೆಯ ಮೇಲೆ ಪತಿಯ ಶವವನ್ನು ಹೆಂಡತಿ ತಬ್ಬಿಕೊಂಡು ಅಳುತ್ತಿದ್ದಳು. ಮೈದುನ ಅಥವಾ ಇತರರು ಸಾಂತ್ವನಗೊಳಿಸಿ ಅವಳನ್ನು ಅನಂತರ ಇಳಿಸಿಕೊಳ್ಳುತ್ತಿದ್ದರು.

2. ಸತ್ತವನು ಕ್ಷತ್ರಿಯನಾದರೆ ದೇಹದ ಜತೆಗೆ ಧನುಸ್ಸನ್ನು ಇಡಲಾಗುತ್ತಿತ್ತು. ಶವದಹನದ ವೇಳೆಯಲ್ಲಿ ಅವನ ತಮ್ಮನೋ, ಬೇರೆಯವರೋ ಧನುಸ್ಸನ್ನು ತೆಗೆದುಕೊಂಡು ಅವನ ವೀರವನ್ನು ಮುಂದುವರಿಸುತ್ತೇನೆಂಬ ಸಂಕೇತವನ್ನು ತಿಳಿಸುತ್ತಿದ್ದರು. ಪ್ರೇತಗಳಿಗೆ ಸದ್ಗತಿ ಬರಲೆಂದೇ ಪಿತೃಮೇಧಗಳ ಆಚರಣೆ ಇದ್ದಿತು.

3. ಸಾವು ಬಾಳಿನ ಕೊನೆಯಲ್ಲ. ವ್ಯಕ್ತಿಯು ಇಹ ಜೀವನದಲ್ಲಿ ಗಳಿಸಿದ ಕರ್ಮಫಲಗಳ ಮೇಲೆ ಬೇರೆ ಲೋಕದಲ್ಲಿ ತನ್ನ ಬದುಕನ್ನು ಮುಂದುವರಿಸುವನು. ಸತ್ತವನು ಮುಂದಿನ ಲೋಕದಲ್ಲಿಯೂ ಸುಖವಾಗಿರಲಿ ಎಂಬುದಾಗಿ ಆಶೆಯನ್ನು ಹೊತ್ತ ಬಂಧುಗಳು ಅವನಿಗಾಗಿ ದೇವತೆಗಳನ್ನು ಪ್ರಾರ್ಥಿಸುತ್ತಿದ್ದರು.

4. ಯಮನು ಪಿತೃಲೋಕದ ಒಡೆಯ. ಪ್ರೇತದ ಯೋಗಕ್ಷೇಮಕ್ಕಾಗಿ ಅವನಿಗೆ ಪ್ರಾರ್ಥನೆ. ಊರ್ಧ್ವಲೋಕಗಳಂತೆ ಕತ್ತಲು ತುಂಬಿರುವ ಅಧೋಲೋಕಗಳಿವೆ. ಅಲ್ಲಿಯೇ ಪಾಪಿಗಳು ಶಿಕ್ಷೆಗಳನ್ನು ಅನುಭವಿಸುವುದು.

5. ಸಂಸ್ಕಾರ ಕ್ರಿಯೆಗಳನ್ನು ಮುಗಿಸಿ ಸ್ತ್ರೀಯರು ಉಚಿತ ವೇಷಭೂಷಣಗಳೊಡನೆ ಮುಂದಾಗಿ ಮನೆಗೆ ಹಿಂದಿರುಗುವರು. ಅಲ್ಲಿ ಮಕ್ಕಳು ಮೊಮಕ್ಕಳೊಡನೆ ಸುಖಜೀವನದ ಮುಂದುವರಿಕೆ. ಮತ್ತೆ ಮೃತ್ಯುವು ಸುಳಿಯದಿರಲೆಂದು ಅಡೆತಡೆ ಹಾಕುತ್ತಿದ್ದರು. ಋಗ್ವೇದದ ಆರ್ಯರಿಗೆ ಸಾವಿನ ಆತಂಕ ಇರಲಿಲ್ಲ. ಉನ್ನತವಾಗಿ ಪೂರ್ಣಾಯುಗಳಾಗಿ ಬಾಳಬೇಕು. ಆಮೇಲೆ ಜಾರಿಕೊಂಡು ಉತ್ತಮಲೋಕಕ್ಕೆ ಹೋಗಬೇಕು. ಸತ್ತವರೂ ಸುಖದಲ್ಲಿ ಇರಬೇಕು. ಬದುಕಿರುವವರೂ ಇಲ್ಲಿ ಶಾಂತಿ ನೆಮ್ಮದಿಯಿಂದ ಇರಬೇಕು.

**ಪಿತೃಲೋಕದ ಕಲ್ಪನೆ:** ಪಿತೃಲೋಕ ಎಂಬುದೊಂದುಂಟು - ಪಿತೃದೇವತೆಗಳ ಲೋಕ, ಸುಕೃತಿಗಳಾದ ಪುರಾತನರು ಆ ಲೋಕವನ್ನು ಸೇರುವರು. ಈ ಲೋಕದ ಬಾಳು ಮುಗಿದವರು ಅಲ್ಲಿಗೆ ಹೋಗಿ ಪಿತೃಗಳೊಡನೆ, ಪಿತೃದೇವತೆಗಳೊಡನೆ ಕಲೆತು ಸುಖವಾಗಿರಬೇಕು.

ಈ ವಿವರ ಪಿತೃಸೂಕ್ತಗಳಿಂದ - ಔರ್ಧ್ವ ದೈಹಿಕ ಸೂಕ್ತಗಳಿಂದ ಹೊರಪಡುತ್ತದೆ.

10ನೇ ಮಂಡಲದ 15ನೇ ಸೂಕ್ತ ಇಂಥದೊಂದು. ಇದರಲ್ಲಿ ಪಿತೃದೇವತೆಗಳ ಪ್ರಶಂಸೆ ಉಂಟು. ಹದಿನಾಲ್ಕು ಋಕ್ಕುಗಳ ಸೂಕ್ತ, ಇದರ ಋಷಿ ಯಮಪುತ್ರ ಶಂಖ. ಮಹಾಪಿತೃಯಜ್ಞದಲ್ಲಿ ಇದರ ವಿನಿಯೋಗ. ಪಿತೃದೈವತ್ಯವಾದ ಈ ಸೂಕ್ತ ಪ್ರಾರಂಭವಾಗುವುದು ಹೀಗೆ: **ಉದೀರತಾ ಮವರ – ಉತ್ಪರಾಸ ಉನಧ್ಯಮಾಃ ಪಿತರಃ ಸೋಮ್ಯಾಸಃ। ಅಸುಂ ಯ ಈಯುರವೃಕಾ ಋತಜ್ಞಾಸ್ತೇ ನೋವಂತು ಪಿತರೋ ಹವೇಷು ॥1॥** (ಈ ಋಕ್ಕು ಸಹ ಪಿತೃ ತರ್ಪಣ ಮಂತ್ರಗಳಲ್ಲೊಂದು)

1. "ಉತ್ತಮ, ಮಧ್ಯಮ, ಅಧಮ ಸ್ಥಾನಗಳಲ್ಲಿರುವ ನಮ ಪಿತೃಗಳಿಗೆಲ್ಲಾ ಒಳ್ಳೆಯ ಹವಿಸ್ಸು ದೊರೆಯಲಿ. ಅವರೆಲ್ಲ ನಮ್ಮ ಬಗ್ಗೆ ಅನುಗ್ರಹಪರರಾಗಿರಲಿ. ತೋಳಗಳಂತೆ ಅವರು ನಮ್ಮನ್ನು ಹಿಂಸಿಸಬಂದವರಲ್ಲ, ನಾವು ನಡೆಸುವ ಯಜ್ಞವನ್ನು ನಾವು ಮಾಡುವ ಆರಾಧನೆಯನ್ನು ತಿಳಿದವರಾಗಿ ನಮ್ಮ ಪ್ರಾಣಗಳನ್ನು ರಕ್ಷಿಸಲು ಬಂದಿರುವವರು ಅವರು. ನಮ್ಮಿಂದ ಆಹ್ವಾನಿತರಾಗಿ ಬಂದಿರುವ ಅವರು ನಮ್ಮನ್ನು ಕಾಪಾಡಲಿ."

2. "ಈಗಾಗಲೇ ಈ ಲೋಕ ಬಿಟ್ಟು ಪಿತೃಲೋಕ ಸೇರಿರುವ ನಮ ಪಿತೃಗಳಿಗೆ ನಮಸ್ಕಾರ, ಅಂತೇ ಇಂದು ನಮ್ಮ ಆಹ್ವಾನವನ್ನು ಮನ್ನಿಸಿ ಈ ಯಜ್ಞದಲ್ಲಿ ಹವಿಸ್ಸು ಸ್ವೀಕರಿಸಲು ಬಂದಿರುವ ಪಿತೃಗಳಿಗೂ, ಶ್ರಾದ್ಧಾದಿಕರ್ಮಗಳಿಗೆ ಬಂದು ಕುಳಿತಿರುವ ಪಿತೃಗಳಿಗೂ ನಮಸ್ಕಾರ."

4-5. "ಪಿತೃಲೋಕ ಸೇರಿರುವ ಬರ್ಹಿಷದ ಪಿತೃಗಳಿರ! ನಮ್ಮ ಸ್ತುತಿಗಳನ್ನು ಕೇಳುವವರಾಗಿ. ನಮ್ಮನ್ನು ಕಾಪಾಡಿ, ನಿಮಗಾಗಿ ನಾವು ಈ ಹವಿಸ್ಸುಗಳನ್ನು ಸಿದ್ಧಪಡಿಸಿದ್ದೇವೆ. ಅವುಗಳನ್ನು ಸ್ವೀಕರಿಸಿ, ಮಂಗಳಪ್ರದರಾಗಿ ನಿಮ್ಮ ರಕ್ಷಣೆಯನ್ನು ನಮಗೆ ನೀಡಿ. ನಮ್ಮನ್ನು ಸುಖಗೊಳಿಸಿ; ಪಾಪರಹಿತರನ್ನಾಗಿ ಮಾಡಿ."

6. "ಪಿತೃಗಳಿರ ! ಈ ಯಜ್ಞವನ್ನು ಮೆಚ್ಚಿಕೊಳ್ಳಿ. ದೌರ್ಬಲ್ಯದಿಂದಾಗಿ ನಮ್ಮಿಂದ ಸಮನಿಸಿರಬಹುದಾದ ತಪ್ಪುಗಳಿಗಾಗಿ ನಮನ್ನು ಹಿಂಸಿಸಬೇಡಿ."

7. "ಈ ಪ್ರಕಾಶಮಾನವಾದ ಜ್ವಾಲೆಗಳ ಸಮೀಪ ಕುಳಿತ ಪಿತೃಗಳಿರ! ಈ ಯಜ್ಞದ ಯಜಮಾನನಿಗೆ ಧನವನ್ನು ಕೊಡಿ. ಯಜಮಾನನ ಮಕ್ಕಳಿಗೆ ಸಂಪತ್ತು ಕೊಡಿ. ನಮಗೆ ವೀರ್ಯವನ್ನು ಕೊಡಿ."

8. "ಹಿಂದೆ ಕ್ರಮವಾಗಿ ದೇವತೆಗಳಿಗೂ, ಪಿತೃಗಳಿಗೂ, ಸೋಮಪೀಥವನ್ನು ದೊರಕಿಸಿದ ಧನವಂತರಾದ ನಮ್ಮ ಈ ಪಿತೃ ವರ್ಗದೊಡನೆ ಹರ್ಷದಿಂದ ಜೊತೆಗೂಡಲು ಅಪೇಕ್ಷಿಸಿರುವ ಯಮ ಅವರೊಡನೆ ತನಗೆ ಇಷ್ಟವಾದ ಹವಿಸ್ಸುಗಳನ್ನು ಉಪಭೋಗಿಸಲಿ."

9. "ಹೇ ಅಗ್ನಿ ! ಯಜ್ಞವಿಧಾನಗಳನ್ನು ಚೆನ್ನಾಗಿ ಬಲ್ಲ, ದೇವತಾ ಸ್ತುತಿಗಳನ್ನು ಪಠಿಸುವ, ಸೋಮರಸವನ್ನು ಸಂಸ್ಕರಿಸಬಲ್ಲ, ಕ್ರಮವಾಗಿ ದೇವತ್ವ ಪಡೆದ, ಸತ್ಯಸಂಧರೂ, ಮೇಧಾವಿಗಳೂ ಆದ ಪಿತೃಗಳೊಡನೆ ನಮ್ಮ ಬಳಿಗೆ ಬಾ."

10. "ಹೇ ಅಗ್ನಿ ! ಸತ್ಯವಂತರೂ, ಯೋಗ್ಯ ಹವಿಸ್ಸು ಭಕ್ಷಿಸುವವರೂ, ಪಾನ ಯೋಗ್ಯವಾದುದನ್ನು ಪಾನ ಮಾಡುವವರೂ, ದೇವತೆಗಳ ಜೊತೆ ಇಂದ್ರನ ರಥದಲ್ಲಿ ಕೂಡುವಂಥವರೂ (ಇಂದ್ರಾದಿ ದೇವತೆಗಳ ಸರಿಸಮಾನರೂ) ಆದ ಸಹಸ್ರ ಸಹಸ್ರ (ಬಹುಸಂಖ್ಯಾತ) ಪಿತೃಗಳೊಡನೆ ಬಾ."

11. "ಅಗ್ನಿಷ್ವಾತ್ತ ಪಿತೃಗಳಿರ ! ನೀವು ನಮ್ಮ ಈ ಪಿತೃಯಜ್ಞಕ್ಕೆ ಬನ್ನಿ, ಸಮೀಚಿನ ಮಾರ್ಗ ನಿರ್ದೇಶಕರಾದ ನೀವು ನಿಮ್ಮ ಇಷ್ಟದಂತೆ ನಿಮಗೆ ಬೇಕಾದ ಸ್ಥಳಗಳಲ್ಲಿ ಕೂತುಕೊಳ್ಳಿ. ಬರ್ಹಿಗಳ ಮೇಲೆ (ದರ್ಭೆಗಳ ಹಾಸು) ಹರಡಿರುವ ಹವಿಸ್ಸುಗಳನ್ನು ಭಕ್ಷಿಸಿ - ಅಥರಯಿಂ ಸರ್ವವೀರಂ ದಧಾತನ - ತರುವಾಯ ಪುತ್ರ ಪೌತ್ರರಿಂದ ಕೂಡಿರುವ ಸಂಪತ್ತನ್ನು ಕೊಡುವವರಾಗಿ."

12. "ಹೇ ಜಾತವೇದ ! (ಜಗವನ್ನೆಲ್ಲ, ಇಲ್ಲಿ ಹುಟ್ಟಿರುವ ಪ್ರಾಣಿಗಳನ್ನೆಲ್ಲ ಬಲ್ಲ ಜಾತವೇದಾಗ್ನಿಯೇ) ನಮ್ಮ ಸ್ತುತಿಯನ್ನು ಮನ್ನಿಸಿ, ನಮ ಮನಸ್ಸುಗಳನ್ನು ಪರಿಮಳಗೊಳಿಸಿ, ಪಿತೃಗಳಿಗೆ ಸೇರಿಸು."

ಗಮನಿಸಬೇಕಾದ ಸಂಗತಿ: ಚಿತೆಗೆ ಅಗ್ನಿಯನ್ನು ಸೋಂಕಿಸುವ ಮೊದಲೇ ಪಂಚಕವಾಗಿಲ್ಲವೆಂ ಬುದನ್ನು ಪುರೋಹಿತರಿಂದ ತಿಳಿಯಬೇಕು. ಧನಿಷ್ಠಾ ನಕ್ಷತ್ರ ಮಧ್ಯದಿಂದ ರೇವತಿ ಅಂತ್ಯದವರೆಗೆ ಬರುವ ಐದು ನಕ್ಷತ್ರಗಳಲ್ಲಿ ಮರಣವಾದರೆ ಸರ್ವದೋಷ ಪರಿಹಾರಕ ವಿಧಿಯ ನಂತರ ದಹನ ಮಾಡಬೇಕು.

ಶವದಹನವನ್ನು - ಶವವನ್ನು ದೇವತೆಗಳಿಗೆ ಅರ್ಪಿಸುವ ಯಜ್ಞವೆಂಬಂತೆ ಆಚರಿಸುವ ಹಿನ್ನೆಲೆಯು ಹೀಗಿರುತ್ತದೆ.

**ಉದಕ ಕರ್ಮ:** ಚಿತೆಯು ಶವವನ್ನು ಆವರಿಸಿಕೊಂಡ ನಂತರ ಜ್ಯೇಷ್ಠನು ತನ್ನ ಎಡಭುಜದ ಮೇಲೆ ನೀರಿನ ಮಡಕೆಯನ್ನು ಹೊತ್ತು ಸಗೋತ್ರದವರೊಂದಿಗೆ ಚಿತೆಯನ್ನು ಶವದ ಪಾದದ ಭಾಗದಿಂದ ಮೂರು ಬಾರಿ ಸುತ್ತುತ್ತಾನೆ. ಮೊದಲ ಸುತ್ತಿನಲ್ಲಿ ಮಡಕೆಗೆ ಕಲ್ಲಿನಿಂದ ಒಂದೆಡೆ ಸಣ್ಣ ರಂಧ್ರವನ್ನು ಮಾಡುತ್ತಾನೆ. ನೀರು ಸುರಿಯುತ್ತಿರುವಾಗ ಸುತ್ತುವಿಕೆ ಪ್ರಾರಂಭವಾಗಿ ಮೂರನೇ ಬಾರಿಗೆ ಮಡಕೆಯನ್ನು ಪೂರ್ತಿಯಾಗಿ ಒಡೆದುಹಾಕಿ, ಬಂಧುಗಳೆಲ್ಲರೂ ಮತ್ತೆ ಹಿಂದಕ್ಕೆ ನೋಡದಂತೆ ಎಡಕ್ಕೆ ತಿರುಗಿ ಸಶಾನದಿಂದ ಈಚೆಗೆ ಬಂದುಬಿಡುತ್ತಾರೆ. ಚಿಕ್ಕವನು ಮೊದಲು ಬರುತ್ತಾನೆ. ಉಳಿದವರು ಹಿಂಬಾಲಿಸುತ್ತಾರೆ.

ಬಳಿಕ ಬಂಧುಬಾಂಧವರೆಲ್ಲರೂ ಹತ್ತಿರವೇ ಇರುವ ಹೊಳೆ, ನದಿ, ಜಲಾಶಯಗಳಿಗೆ ಹೋಗಿ ಒಂದೇ ವಸ್ತ್ರದೊಂದಿಗೆ ದಕ್ಷಿಣದ ಕಡೆಗೆ ಮುಖಮಾಡಿ, ಪ್ರಾಚೀನಾವೀತಿಯಲ್ಲಿ ಸ್ನಾನ ಮಾಡುವರು. ಉದಕ ತುಂಬಿದ ಮಡಕೆಯನ್ನು ಒಡೆದ ಕಲ್ಲನ್ನು ಜಲಾಶಯದ ದಂಡೆಯ ಮೇಲಿಟ್ಟು ಅದರ ಮೇಲೆ ಎಳ್ಳು ನೀರನ್ನು ಹಾಕುತ್ತಾರೆ. ಸಾವನ್ನಪ್ಪಿದವನ ಹೆಸರು, ಗೋತ್ರಗಳನ್ನು ಹೇಳಿ ದಹನ ಕಾಲದಲ್ಲಿ ಆಗುವ ದಾಹ ಶಮನವಾಗಲಿ ಎಂದು, ಬಿಡುವ ಎಳ್ಳುನೀರು ನಿನಗೆ ಸೇರಲಿ ಎಂದು ಪ್ರಾರ್ಥಿಸುತ್ತಾರೆ.

ಅಧಿಕಾರಿಗಳು: ಈ ಪಿತೃಯಜ್ಞಕ್ಕೆ ಮಕ್ಕಳು ಅಥವಾ ದತ್ತು ಪುತ್ರರು ಮುಖ್ಯ ಅಧಿ ಕಾರಿಗಳು. ನಂತರ ಅಧಿಕಾರವುಳ್ಳವರು ಸಹೋದರ ಪುತ್ರರು, ನಂತರ ದೌಹಿತ ಅಥವಾ ಜ್ಞಾತಿಗಳು, ಅಥವಾ ಸ್ವಜಾತಿಯ ಬೇರೊಬ್ಬರು. ಯಾರೂ ಇಲ್ಲದಿದ್ದರೆ ರಾಜ್ಯದ ಶಾಸಕರು ಓರ್ವ ವ್ಯಕ್ತಿಯಿಂದ ಮಾಡಿಸಬೇಕು. ಶವಸಂಸ್ಕಾರವಂತೂ ಆಗಲೇಬೇಕು.

ಉದಕಕರ್ಮದ ನಂತರ ಮನೆಗೆ ಹೋಗಿ ಮತ್ತೆ ಸ್ನಾನವನ್ನು ಮಾಡಿ ಗೋಗ್ರಾಸವನ್ನು ಕೊಡಬೇಕು. ಮನೆಯ ಅನ್ನವನ್ನು ಊಟ ಮಾಡದೆ ಬಂಧುಗಳು ತಂದಿಟ್ಟ ಊಟವನ್ನು ಪತ್ರಾವಳಿಯಲ್ಲಿ ಮಾಡಬೇಕು. ಶುದ್ಧಿತತ್ವದಲ್ಲಿ ಉಪ್ಪಿಲ್ಲದ ಆಹಾರ, ಒಂದೇ ಹೊತ್ತು ತಿನ್ನಬೇಕು. ಮೂರು ದಿನ ಯಾವ ವ್ಯವಹಾರದ ಕೆಲಸಗಳನ್ನು ಮಾಡಬಾರದು ಎಂದು ಹೇಳಿದೆ.

ಆಶೌಚ: ಮಕ್ಕಳಿಗೆ ಮತ್ತು ಹತ್ತಿರದ ದಾಯಾದಿಗಳಿಗೆ ಹತ್ತು ದಿನ ಆಶೌಚವಿರುತ್ತದೆ. ಕ್ಷತ್ರಿಯರಿಗೆ ವೈಶ್ಯರಿಗೆ ಶೂದ್ರರಿಗೆ 12, 15, 30 ದಿನಗಳ ಆಶೌಚವಿರುತ್ತದೆ. ಮೃತಪಟ್ಟ ಸ್ಥಳದಲ್ಲಿ ಹಣತೆಯ ದೀಪವನ್ನು ದಕ್ಷಿಣಾಭಿಮುಖವಾಗಿ ಹತ್ತು ದಿನವಿಡಬೇಕೆಂದೂ, ನೀರನ್ನು ತುಂಬಿದ ಜಲಪಾತ್ರೆಯನ್ನಿಡಬೇಕೆಂದು ಧರ್ಮಸಿಂಧುವಿನಲ್ಲಿ ಹೇಳಲಾಗಿದೆ. ಪ್ರತಿದಿನವೂ ಮೃತನು ಸರಾಗವಾಗಿ ತನ್ನ ಲೋಕಕ್ಕೆ ತೆರಳುವುದಕ್ಕಾಗಿ ಪಾತೇಯಶ್ರಾದ್ಧವೆಂಬುದಾಗಿ ಅನ್ನವನ್ನು ನೀಡಬೇಕು.

**ಅಸ್ಥಿಸಂಚಯನ :** ಗರುಡಪುರಾಣವು ದ್ವಿಜರಿಗೆ ನಾಲ್ಕನೆಯ ದಿನ ಅಸ್ಥಿಸಂಚಯನ ಮಾಡುವುದೆಂಬುದಾಗಿ ಹೇಳಿದೆ. ಒಂದು, ಮೂರು, ಏಳು ಮತ್ತು ಒಂಭತ್ತನೆಯ ದಿನಗಳನ್ನೂ ಸಹ ಅದು ಸೂಚಿಸಿದೆ. ವಿದ್ಯುತ್ ಚಿತೆಯಲ್ಲಿ ಶವದಹನವಾದರೆ ಅಸ್ಥಿಸಂಚಯ ನವು ಕಷ್ಟವಾದುದರಿಂದ ಪ್ರಾಯಃಶ್ಚಿತ್ತ ಪುರಸ್ಕರವಾಗಿ ಮಾಡಬೇಕೆನ್ನುತ್ತಾರೆ. ಪುಣ್ಯ ನದಿಗಳು, ಸಂಗಮಸ್ಥಳಗಳಲ್ಲಿ ಅಸ್ಥಿಯನ್ನು ಬಿಡಬಹುದು. ಹೀಗೆ ಜಲಾಶಯಗಳಲ್ಲಿ ಅಸ್ಥಿಯನ್ನು ಸಂಚಯನ ಮಾಡುವಾಗ "**ಈ ಮಾತೃಭೂಮಿಯು ವಿಶಾಲವೂ, ಸಹ್ಯವೂ ಆಗಿದೆ. ಭೂಮಿಯು ಉಣ್ಣೆಯ ಬಟ್ಟೆಯಂತೆ ನಿನಗೆ ಮೃದುವಾಗಿರಲಿ, ನಿನ್ನನ್ನು ಸಂಕಟಗಳಿಂದ ಪಾರು ಮಾಡಲಿ**" ಎಂದು ಕರ್ತನು ನದೀಜಲಗಳನ್ನೂ, ಭೂಮಿಯನ್ನು ಪ್ರಾರ್ಥನೆ ಮಾಡಿಕೊಳ್ಳುತ್ತಾನೆ.

ಬಹು ಹಿಂದಿನ ಕಾಲಗಳಲ್ಲಿ ಅಸ್ಥಿಗಳನ್ನು ಹೂಳಿಡುವುದಕ್ಕಿಂತ ಜಲಾಶಯಗಳಲ್ಲಿ ನದಿಗಳಲ್ಲಿ ಬಿಡುವುದು ಶ್ರೇಷ್ಠವೆಂದು ಪರಿಗಣಿಸಲಾಗಿತ್ತು. ಅದರಲ್ಲೂ ಗಂಗಾನದಿಯಲ್ಲಿ ಬಿಟ್ಟ ಮೃತನ ಅಸ್ಥಿಯು ಇರುವ ತನಕವೂ ಮೃತನು ಸ್ವರ್ಗದಲ್ಲಿರುತ್ತಾನೆಂಬುದಾಗಿ ತಿಳಿಯಲ್ಪಡುತ್ತಿತ್ತು. ಈಗಲೂ ಈ ಭಾವನೆಯು ಗಾಢವಾಗಿದೆ.

ಯಜ್ಞಗಳ ವಿಷಯದಲ್ಲಾದರೋ ಶ್ರೌತಕರ್ಮಗಳಲ್ಲಿ ಅಗ್ನಿತ್ರಯದ ಹಾಗೂ ಗೃಹ್ಯದಲ್ಲಿ ಏಕಾಗ್ನಿಯ ಬಳಕೆಯು ರೂಢಿಯಲ್ಲಿದೆಯಷ್ಟೆ ಆದರೆ ಪ್ರೇತ, ಪಿತೃಗಳಿಗೆ ಆಹುತಿಗಳನ್ನು ಅರ್ಪಿಸುವ ವಿಷಯದಲ್ಲಿ ಮಾತ್ರ ಗೃಹ್ಯವಿಧಾನದ ಏಕಾಗ್ನಿಯಂತೆ, ಶ್ರೌತದಲ್ಲೂ, ಅಗ್ನಿತ್ರಯಗಳಲ್ಲಿ ಒಂದಾದ ದಕ್ಷಿಣಾಗ್ನಿಯ ಬಳಕೆ ಮಾತ್ರ ಇರುತ್ತದೆ.

(ಉಳಿದೆರಡು ಅಗ್ನಿಗಳಿಗೆ ಔಪಚಾರಿಕ ಪೂಜೆ ಮಾತ್ರ ಇರುತ್ತದೆ) ಪ್ರೇತ ಮತ್ತು ಪಿತೃಗಳಿಗೆ ಸಂಬಂಧಿಸಿದಂತೆ ಎರಡು ಕಲ್ಪನೆಗಳಿದ್ದರೂ, ಅರ್ಥಪೂರ್ಣವಾಗಿ ಎರಡನ್ನೂ ವಿಂಗಡಿಸಿ ಅವುಗಳಿಗೆ ಆಯಾ ಸ್ಥಾನಗಳನ್ನು ಕಲ್ಪಿಸಲಾಗಿದೆ. ಇದರಲ್ಲಿ ಸಂದಿಗ್ಧಗಳೇನೂ ಇಲ್ಲ. ಒಂದನೆಯದು ಎಂದರೆ ಪಿತೃವು ಅತಿ ದೂರದ ಅರ್ಥ ವಿಸ್ತೃತರಾದ ಪಿತೃಗಳು. ಇವರಿಗೆ ಸಮಬಂಧಿಸಿದಂತೆ ಮಾಡುವ ವಿಧಿಕ್ರಿಯೆಗಳು. ಮತ್ತೊಂದು ಇತ್ತೀಚೆಗೆ ಮೃತರಾಗಿ ಇನ್ನೂ ಪ್ರೇತರಾಗಿಯೇ ಇರುವವರು. ಗೃಹ್ಯವಿಧಾನದ ಶ್ರಾದ್ಧಗಳಲ್ಲಿ ಪ್ರೇತ, ಪಿತೃ - ಇವರಿಬ್ಬರೂ ಸೇರಿದ್ದಾರೆ. ಪಿತೃಯಜ್ಞ, ಮಾಸಿಕಾಶ್ರಾದ್ಧಾ, ಅಷ್ಟಕಾ, ಅನ್ವಷ್ಟಕ - ಈ ಕರ್ಮಗಳಲ್ಲಿ ಪಿತೃಗಳು ಪೂಜಿತರಾಗಿ ದೇವತೆಗಳಂತೆಯೇ ಬಂಧುಗಳು, ಮಕ್ಕಳು ಕೊಡುವ ಆಹುತಿಗಳನ್ನು ಸ್ವೀಕರಿಸುತ್ತಾರೆ. ಎರಡನೆಯದಾದ ಪ್ರೇತವು ಮರಣಾನಂತರದ ಅಂತ್ಯ ಕ್ರಿಯೆಗಳಲ್ಲಿ ಏಕೋದ್ದಿಷ್ಟ, ಸಪಿಂಡೀಕರಣ ಶ್ರಾದ್ಧಗಳಲ್ಲಿ ಕಾಣಸುತ್ತದೆ. ಸಪಿಂಡೀಕರಣದ ಉದ್ದೇಶವೆಂದರೆ ಒಂದು ಸಂತತಿಯಿಂದ ಇನ್ನೊಂದಕ್ಕೆ ಪಿತೃಪೂಜೆಯು ಮುಂದುವರಿಯುವುದನ್ನು ಎತ್ತಿ ಹೇಳುತ್ತದೆ. ಆದುದರಿಂದಲೇ ಭಾರತೀಯರ ಗೃಹಸ್ಥಾಶ್ರಮ ಜೀವನದಲ್ಲಿ ಪ್ರಜೋತ್ಪತ್ತಿಗೆ ಮಹತ್ವದ ಸ್ಥಾನವನ್ನು ಕೊಟ್ಟಿರುವುದು.

**ಮಲಿನ ಷೋಡಶಿ :** ಹತ್ತು ದಿನಗಳ ದಶಗಾತ್ರ ವಿಧಿಯಿಂದ ಅಂಗುಷ್ಟ ಮಾತ್ರವಿದ್ದ ಪ್ರೇತ ಶರೀರಕ್ಕೆ ಒಂದೊಂದು ದಿನದ ಪಿಂಡದಿಂದಲೂ ಅವಯವಗಳು ಬಂದು, ಹತ್ತರಂದು ಹಸಿವು ಬಾಯಾರಿಕೆಗಳುಂಟಾಗಿ, ವಾಯುರೂಪವಾದ ಶರೀರವು ಹೋಗಿ ಹಸ್ತಮಾತ್ರದ ಭೋಗಯೋಗ್ಯ, ಯಾತನಾರೂಪವಾದ ಶರೀರವುಂಟಾಗುವುದು. ಅಂದಿನವರೆಗೆ ನಡೆಯುವ ಹದಿನಾರು ಶ್ರಾದ್ಧಗಳಿಗೆ ''ಮಲಿನಷೋಡಶಿ'' ಎನ್ನುತ್ತಾರೆ. ಇದೇ ಸಮಯದಲ್ಲಿಯೇ ಕಾಕಾದಿಗಳಿಗೆ ಪಿಂಡ ನೀಡುವುದು ಇತ್ಯಾದಿ ವಿಧಿಗಳಿವೆ.

ದಶಗಾತ್ರ ವಿಧಿಯು ಹತ್ತನೇ ದಿನ ಮುಗಿಯುತ್ತದೆ. ಅಂದೇ ಧರ್ಮವೇದಿಕಾರಾಧನೆಯೂ ನಡೆಯುತ್ತದೆ. ಹಸಿವು ಬಾಯಾರಿಕೆಗಳಿಂದ ಬಳಲಿದ ಪ್ರೇತವು ತೃಪ್ತಿಪಡೆಯಲು ಅಂದು ವಾಯಸವು (ಕಾಗೆ) ಪಿಂಡವನ್ನು ಭಕ್ಷಿಸಲೇಬೇಕೆನ್ನುವ ಅಭಿಪ್ರಾಯದಿಂದ ಕರ್ತೃಗಳು ವಿಶೇಷ ಶ್ರದ್ಧೆಯಿಂದ ಕರ್ಮವನ್ನು ಆಚರಿಸಬೇಕು. ಕಾಗೆಗಳು ಬಂದು ಮುಟ್ಟದಿದ್ದರೆ ಹಿರಿಯರು ಅದಕ್ಕಾಗಿ ಕಾಯುವುದೂ ಉಂಟು. ಸರ್ವಥಾ ಕಾಗೆಯು ಬಾರದೇ ಇದ್ದರೆ ದರ್ಭೆಯಲ್ಲಿ ಕಾಗೆಯ ಆಕಾರವನ್ನು ಮಾಡಿ ಪಿಂಡಕ್ಕೆ ಮುಟ್ಟಿಸುತ್ತಾರೆ. ಬೋಧಾಯನ ಧರ್ಮ ಸೂತ್ರದಲ್ಲಿ ಪಿತೃಗಳು ಕಾಗೆಯ ರೂಪದಲ್ಲಿ ಬರುತ್ತಾರೆಂದೂ, ಪಿಂಡ, ಅನ್ನಾದಿಗಳನ್ನು ತಿನ್ನುವರೆಂದೂ ಹೇಳಿದೆ.

ಮೃತನ ಪತ್ನಿಯನ್ನು ಹತ್ತು ದಿನದೊಳಗೆ ಬೆಸ ದಿನಗಳಲ್ಲಿ ಬಂಧುಗಳು, ಇಷ್ಟಮಿತ್ರರ ಮನೆಯ ಮುತ್ತೈದೆಯರು ಬಂದು ಮಂಗಳ ದ್ರವ್ಯಗಳನ್ನು ಆಕೆಗೆ ಕೊಟ್ಟು ಮಾತನಾಡಿಸಿಕೊಂಡು ಹೋಗುವ ಪದ್ಧತಿ ಇರುತ್ತದೆ. ತವರು ಮನೆಯವರು ತಮ್ಮ ಮನೆಗೆ ಕರೆದುಕೊಂಡು ಹೋಗಿ ಮಂಗಳದ್ರವ್ಯಗಳನ್ನು ಕೊಡುವುದೂ ಉಂಟು.

ಕೆಲವು ಋಗ್ವೇದದ ಮಂತ್ರಗಳು ಚಿತಾಗ್ನಿಯಿಂದ ಮೃತನು ನೇರವಾಗಿ ಪಿತೃಗಳ ಸಮೀಪಕ್ಕೆ ಹೋಗುವನೆಂದು ಹೇಳಿವೆ. ಆದರೆ ಪ್ರೇತನನ್ನು ಸಪಿಂಡೀಕರಣದ ನಂತರವೇ ಪಿತೃಗಳ ಸಾಲಿಗೆ ಸೇರಿಸಲು ಸಾಧ್ಯವೆಂದು ಮುಂದೆ ಬಂದ ಸ್ಮೃತಿಗಳು ಹೇಳುತ್ತವೆ. ಮೃತನ ಮಗನು ಶ್ರೌತಾಗ್ನಿಗಳನ್ನು ಇಟ್ಟುಕೊಂಡಿದ್ದರೆ ಹನ್ನೆರಡನೆಯ ದಿನವೇ ಮಾಡಬಹುದೆಂದು ಸೂತ್ರಗಳು ತಿಳಿಸುತ್ತವೆ. ಈಗ ಹನ್ನೆರಡನೇ ದಿನವೇ ಮಾಡಲ್ಪಡುತ್ತದೆ. ಅದರ ಆಚರಣೆ ಹೀಗಿದೆ: ಎಳ್ಳು, ಗಂಧ, ಜಲ ಇವುಗಳಿಂದ ತುಂಬಿದ ನಾಲ್ಕು ಉದಕುಂಭಗಳನ್ನು ಸಿದ್ಧಪಡಿಸಿಕೊಳ್ಳಬೇಕು. ಒಂದು ಉದಕುಂಭವು ಪ್ರೇತನಿಗೆ, ಉಳಿದ ಮೂರು ಅವನ ಪಿತೃ, ಪಿತಾಮಹ, ಪ್ರಪಿತಾಮಹ ಇವರಿಗೆ. ಇವರುಗಳಿಗೆ ನಾಲ್ಕು ಪಿಂಡಗಳೂ ಸಿದ್ಧವಾಗುತ್ತದೆ. ಕರ್ತೃವು, ಪ್ರೇತಕುಂಭದ ದ್ರವ್ಯವನ್ನು ಉಳಿದ ಮೂರು ಪೂರ್ವಜರ ಕುಂಭಗಳಿಗೆ ಸುರಿಯುತ್ತಾನೆ. ಇಲ್ಲಿಂದ ಮುಂದೆ ಪ್ರೇತತ್ವ ಹೋಗುತ್ತದೆ. ಮೂವರು ಮಾತ್ರವಿರುವ ಪಿತೃಗಳಲ್ಲಿ ಮೊದಲನೆಯ ಸ್ಥಾನವನ್ನು ಪಡೆಯುತ್ತಾನೆ. ಈಗ ಪ್ರೇತನು ಪ್ರಪಿತಾಮಹ(ಪಿತೃ ದೇವತಾಸ್ಥಾನಕ್ಕೇರಿಸಲ್ಪಟ್ಟು) ಕೈ ಬಿಟ್ಟುಹೋಗುತ್ತಾನೆ. ನಾಲ್ಕನೇ ಪಿಂಡ ಇರುವುದಿಲ್ಲ

(ಶತಪಥ ಬ್ರಾಹ್ಮಣ ಮತ್ತು ಕಾತ್ಯಾಯನ ಶ್ರೌತಸೂತ್ರವು ಮೃತನಿಗೆ ಸಾರಕವನ್ನು ಹೇಳುತ್ತವೆ. ಈಗ ಯಾರೂ ಅದನ್ನು ಅನುಸರಿಸುವುದಿಲ್ಲ).

ಹೇಗೆ ಉದಕುಂಭದ ದ್ರವ್ಯಗಳನ್ನು ಉಳಿದ ಉದಕುಂಭಗಳಿಗೆ ಸೇರಿಸಲ್ಪಟ್ಟಿತೋ ಅದೇ ರೀತಿ ಪಿಂಡವನ್ನು ಮೂರು ಭಾಗ ಮಾಡಿ ಉಳಿದ ಪಿಂಡಗಳ ಜತೆಗೆ ಸೇರಿಸುವ ಅಣತಿ ಪಡೆದು ಕರ್ತನು ಅದನ್ನು ಮಾಡುತ್ತಾನೆ. ಇಲ್ಲಿಗೆ ಮೃತನ ಪ್ರೇತತ್ವವು ಹೋಗಿ ಆತನು ಪಿತೃಗಳ ಜತೆ ಪಿತೃದೇವತೆಗಳ ಸ್ಥಾನವನ್ನು ಪಡೆದುಕೊಳ್ಳುತ್ತಾನೆ. ವಸು, ರುದ್ರಾದಿತ್ಯರಂತೆ ನಿಗ್ರಹಾನುಗ್ರಹಶಕ್ತಿಯೂ ಬರುತ್ತದೆ.

**ಧರ್ಮೋದಕ :** ಹತ್ತನೇ ದಿನ ಜ್ಞಾತಿಗಳೂ, ಬಂಧುಗಳೂ, ಇಷ್ಟಮಿತ್ರರೂ ಪ್ರೇತದ ಪ್ರೇತತ್ವ ನಿವೃತ್ತಿಗಾಗಿಯೂ, ಋಣಾನುಬಂಧ ನಿವೃತ್ತಿಗಾಗಿಯೂ ಧರ್ಮೋದಕವನ್ನು ಅರ್ಪಿಸುತ್ತಾರೆ. ಕೂರ್ಚದಲ್ಲಿ ಅವಾಹಿಸಿ, ಜ್ಞಾತಿ, ಬಂಧು ಮತ್ತು ಇಷ್ಟರೂ ಧರ್ಮೋದಕವನ್ನು ಕೊಟ್ಟನಂತರ ಕರ್ತೃಗಳು ಕಡೆಯಲ್ಲಿ ಕೊಡುತ್ತಾರೆ. ಇದಾದ ನಂತರ ಕರ್ತೃಗಳು ತಮ್ಮ ದೀಕ್ಷಾ ಬಟ್ಟೆಗಳನ್ನೂ ಜಲಪಾತ್ರೆ, ಶಿಲೆ ಮತ್ತು ವಾಸಸ್ಸನ್ನು ವಿಸರ್ಜಿಸಬೇಕು. ಹೊಸ ಜನಿವಾರವನ್ನು ಹಾಕಿಕೊಳ್ಳಬೇಕು.

**ದಶಾಹ ಪರ್ಯಂತ ಕರ್ತೃವಿಗೆ ನಿಯಮಗಳು:** ಮೃತನ ಸಂಸ್ಕಾರ ವಿಧಿಗಳ ಕರ್ತೃವಿಗೆ ದಶಾಹಪರ್ಯಂತ ಅನುಸರಿಸಬೇಕಾದ ಕೆಲವು ನಿಯಮಗಳಿವೆ: ಮತ ಲಾಂಛನವಾದ ಭಸ್ಮ ಮುದ್ರಾಧಾರಣೆ, ತಿಲಕಗಳನ್ನು ಇಟ್ಟುಕೊಳ್ಳಬಾರದು. ಸೂತಕವಿರುವುದರಿಂದ ನಮಸ್ಕಾರಗಳನ್ನಾಗಲೀ, ಉಪಚಾರಗಳನ್ನಾಗಲೀ ಮಾಡಬಾರದು. ಜ್ಞಾತಿಗಳ ಹೊರತೂ ಬೇರೆ ಯಾರ ಮನೆಯೊಳಗಾಗಲೀ ಹೋಗಬಾರದು. ಸ್ತ್ರೀಸಂಗ, ರಾತ್ರಿಭೋಜನ, ಮಂಚದಲ್ಲಿ ಶಯನ, ದೇವತಾರ್ಚನ, ಬ್ರಹಯಜ್ಞ, ವೈಶ್ವದೇವ, ಅತಿಥಿ ಸತ್ಕಾರ, ಭಿಕ್ಷೆ ನೀಡುವುದು, ಸಿಹಿಭೋಜನ, ಹೊರಗೆ ಪಾನೀಯ, ಉಪಾಹಾರಾದಿ ಭಕ್ಷಣೆ, ಅವಿಹಿತ ನಿತ್ಯ ಕೌರ್‍ಆಗಳು ಇವುಗಳನ್ನೆಲ್ಲಾ ವರ್ಜಿಸಬೇಕು. ತ್ರಿಕಾಲಸಂಧ್ಯಾವಂದನೆಯನ್ನು ಮಾತ್ರ ಮಾಡಲೇಬೇಕು.

ವರ್ಷಪರ್ಯಂತ ವರ್ಜ್ಯಗಳೂ ಇವೆ. ತೀರ್ಥಯಾತ್ರೆ, ಪರಾನ್ನಭೋಜನ, ಆರ್ತ್ವಿಜ್ಯ, ಕಾಮ್ಯಕರ್ಮಗಳು, ವ್ರತಾದಿಗಳ ಆಚರಣೆ ಇಲ್ಲ. ಶುಭಸಂಸ್ಕಾರ ಕ್ರಿಯೆಗಳು ಇಲ್ಲ.

ಜ್ಞಾತಿಗಳಿಗೆಲ್ಲಾ ಹನ್ನೊಂದನೆಯ ದಿನ ಅಶೌಚವು ಕಳೆಯುವುದು. ಕರ್ತೃಗಳಿಗೂ ಅವರ ಪತ್ನಿಯರಿಗೆ ಅಂದೂ ಅಶೌಚವಿರುತ್ತದೆ. ಅಂದು ಸ್ನಾನಾಂತರ ಹೊಸ ಯಜ್ಞೋಪವೀತ ಧರಿಸಿ ಸಂಧ್ಯಾನುಷ್ಠಾನ ಮಾಡಿ ಪುಣ್ಯಾಹ, ವೃಷೋತ್ಸರ್ಗಾಂಗ ಹೋಮ, ವೃಷೋತ್ಸರ್ಗ (ಮುಂದೆ ಹೇಳಿದೆ) ಇತ್ಯಾದಿಗಳನ್ನು ಮುಗಿಸಿದ ಮೇಲೆ ಮರುದಿನ ಸಪಿಂಡೀಕರಣ. ಇದಾದ ನಂತರ ಕರ್ತೃಗಳಿಗೆ ಅಶೌಚ ಹೋಗುತ್ತದೆ. ಬಂಧುಗಳು ಆ ದಿನ ಅವರಿಗೆ ನೂತನ ವಸ್ತ್ರಗಳನ್ನು ಕೊಡುತ್ತಾರೆ.

ಸಪಿಂಡೀಕರಣದ ನಂತರ ಪ್ರಪ್ರಪಿತಾಮಹರು ಸ್ವರ್ಗ ಪಾಥೇಯ ಶ್ರಾದ್ಧದಿಂದ ತೃಪ್ತರಾಗಿ ಸ್ವರ್ಗಕ್ಕೆ ತೆರಳುವರು. ಅದರ ತೃಪ್ತಿಸೂಚಕವಾಗಿ ವೈಕುಂಠಸಮಾರಾಧನೆಯನ್ನು ನಡೆಸುವರು. ಭೂರಿಭೋಜನ, ಭೂರಿದಾನಗಳನ್ನು ಮಾಡುತ್ತಾರೆ. ಮೃತರಿಗೆ ವೈಕುಂಠ ಪ್ರಾಪ್ತಿಯೆಂದೂ ಕೆಲವರ ಅಭಿಪ್ರಾಯ.

ಶ್ರಾದ್ಧದಲ್ಲಿ ಭಾಗವಹಿಸುವ ಕರ್ತೃ, ಪುರೋಹಿತರು, ನಿಮಂತ್ರಿತರು, ಪಾಕ ಸಿದ್ಧಪಡಿಸುವವರ ಕರ್ತವ್ಯಗಳು ಬಹು ಮುಖ್ಯವಾದದ್ದು. ಸಾಪಿತೃಮಾತೃ ಶ್ರಾದ್ಧವನ್ನು ಜೀವತ್ಪಿತೃಕನ ಮಗನೇ ಮಾಡುವುದು ಶ್ರೇಷ್ಠ. ತಂದೆಗೆ ಅನೇಕ ಪುತ್ರರಿದ್ದು ಇವರು ಅವಿಭಕ್ತರಾಗಿದ್ದರೆ ಒಟ್ಟಾಗಿ ಸೇರಿ ಕರ್ಮಗಳನ್ನು ನಿರ್ವಹಿಸಬೇಕು. ವಿಭಕ್ತರಾಗಿದ್ದರೆ ಪ್ರತ್ಯೇಕವಾಗಿ ತಮ್ಮ ಮನೆಗಳಲ್ಲಿಯೇ ಮಾಡಿಕೊಳ್ಳಬಹುದು. ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಕಾರಣಾಂತರದಿಂದ ಬೇರೆಯಾಗಿ ಮಾಡುತ್ತಿದ್ದು ನಂತರ ಒಟ್ಟಾಗಿ ಸೇರಿ ಮಾಡುವ ಕರ್ಮದ ದ್ರವ್ಯ ವೆಚ್ಚ, ಶ್ರಮವೆಚ್ಚಗಳನ್ನು ಎಲ್ಲ ಮಕ್ಕಳೂ ಸಮಾನವಾಗಿ ಹಂಚಿಕೊಂಡು ಶ್ರದ್ಧಾಭಕ್ತಿಗಳಿಂದ ಕರ್ಮ ಮಾಡಬೇಕು. ವಾದಗಳಿಂದ, ಶುಷ್ಕತರ್ಕ, ಪ್ರತಿಷ್ಠೆಗಳಿಂದ ಕರ್ಮಫಲಗಳು ಕ್ಷೀಣಗೊಳ್ಳುತ್ತವೆಂಬುದನ್ನು ಗಮನಿಸಬೇಕು. ಒಬ್ಬರೇ ವೆಚ್ಚ ಮಾಡುವುದು ಸೂಕ್ತವಲ್ಲ. ಹಿರಿಯರು ಮೃತರಾದ ಸಮಯದಲ್ಲಿ ವರ್ಷಾಂತ್ಯದ ಕರ್ಮಗಳನ್ನು ಸಹ ಒಟ್ಟಾಗಿಯೇ ಮಾಡಬೇಕು.

ಕರ್ತೃವು ಶ್ರಾದ್ಧದ ಹಿಂದಿನ ದಿನ, ಶ್ರಾದ್ಧದಿನ, ಮುಂದಿನ ದಿನಗಳಲ್ಲಿ ಬ್ರಹಚರ್ಯದಲ್ಲಿರಬೇಕು. ಪ್ರತಿಗ್ರಹ, ಪರಾನ್ನ, ತಾಂಬೂಲ, ಕ್ಷೌರ, ದಂತಧಾವನಾದಿಗಳನ್ನು ವರ್ಜಿಸಬೇಕು. ಹಿಂದಿನ ರಾತ್ರಿ ಸಾತ್ವಿಕ ಉಪಹಾರ, ಶ್ರಾದ್ಧಾನಂತರವೇ ಭೋಜನ. ಆತನು ಒದ್ದೆಬಟ್ಟೆ, ಮಗುಟ, ಬಣ್ಣದ ಬಟ್ಟೆಗಳನ್ನು ಧರಿಸಬಾರದು. ಬಿಳಿ ಕಚ್ಚೆಪಂಚೆ, ಬಿಳಿ ಉತ್ತರೀಯ ಧರಿಸಬೇಕು. ವಿಭೂತಿ ಮುಂತಾದ ಲಾಂಛನಗಳನ್ನು ಧರಿಸಬಾರದು.

**ದಾನಾದಿಗಳು ಇತ್ಯಾದಿ:** ಪ್ರೇತ ಶರೀರವು ಹೋಗಿ, ಭೋಗ ಶರೀರವೂ, ದೇವತ್ವವೂ ಲಭ್ಯವಾಗುವವರೆಗೆ ಗರುಡ ಪುರಾಣದಲ್ಲಿಯೂ, ಸತಿಗಳಲ್ಲಿಯೂ ನಾನಾ-ಬಗೆಯ ದಾನಾದಿಗಳನ್ನು ಹೇಳಿದೆ. ಅವುಗಳನ್ನು ಪಾಲಿಸಲು ಈಗಿನ ಕಾಲದಲ್ಲಿ ಎಂತಹ

ಶ್ರೀಮಂತರುಗಳಿಂದಲೂ ಸಾಧ್ಯವಾಗುವುದಿಲ್ಲ. ಹಾಗೆಂದು ಕರ್ಮಗಳನ್ನು ನಿರ್ಲಕ್ಷಿಸಿದರೆ ಪಾಪಸಂಚಿತವಾಗುತ್ತದೆ. ಆದುದರಿಂದಲೇ ಹಿರಿಯರಾದವರು ಅನೇಕ ಮಧ್ಯಮ ಮಾರ್ಗಗಳನ್ನು ರೂಪಿಸಿರುತ್ತಾರೆ.

ಇಂತಹ ಸಂದಿಗ್ಧ ಸಮಯಗಳಲ್ಲಿ ಕರ್ತೃವಿನ ದ್ರವ್ಯಶಕ್ತಿಯನ್ನು ಪುರೋಹಿತರುಗಳು ಅರ್ಥ ಮಾಡಿಕೊಳ್ಳುವುದು ಒಳಿತು. ಕರ್ತೃವಿಗೆ ಮಾಡುವ ಕರ್ಮದಲ್ಲಿ ಶ್ರದ್ಧಾಸಕ್ತಿಗಳು ಉಳಿದುಕೊಳ್ಳಬೇಕಾದರೆ, ಬ್ರಾಹ್ಮಣ್ಯವು ನಡೆದುಕೊಂಡು ಹೋಗಬೇಕಾದರೆ, ಅವರ ಜವಾಬ್ದಾರಿಯು ವಿಶೇಷವಾಗಿರುತ್ತದೆ. ಕರ್ಮದ ಬಗ್ಗೆ ಶ್ರದ್ಧೆಯೇ ಅಗತ್ಯವಾದದ್ದು. ಈಗಿನ ಕಾಲದಲ್ಲಿ ಭೂದಾನ, ಗೋದಾನ, ಸುವರ್ಣ ದಾನಗಳು ಸಾಮಾನ್ಯರಿಂದ ಸಾಧ್ಯವೇ? ಇದು ಕರ್ತೃವಿಗೂ, ಪುರೋಹಿತರಿಗೂ, ಜನರಿಗೂ ತಿಳಿದಂತಹ ವಿಷಯವೇ. ಆದುದರಿಂದಲೇ ಪ್ರತ್ಯಾಮ್ನಾಯ ಎಂಬ ಪ್ರಕ್ರಿಯೆಯನ್ನು ಹೇಳಲಾಗಿದೆ. ಕರ್ತೃವಿಗೆ ಭಾರವಾಗದಂತೆ, ಅದರ ಬದಲಾಗಿ ಇದು ಎನ್ನುವಂತಹ ಅನಿವಾರ್ಯವಾದ ಮಧ್ಯಮಮಾರ್ಗ.

**ಉತ್ತರಕ್ರಿಯಾದಿಗಳ ಸಂಕ್ಷಿಪ್ತ ವಿವರಣೆ :** 1. ಸಾವು ಸಂಭವಿಸಿದ ದಿನ ಏನು ಮಾಡಬೇಕೆಂಬುದನ್ನು ಹೇಳಿದೆ. ಶವದಹನವಾದ ನಂತರ ಸತ್ತ ಸ್ಥಳದಲ್ಲಿ ಸಾರಿಸಿ, ಶುದ್ಧಮಾಡಿ, ಹನ್ನೆರಡು ದಿನಗಳವರೆಗೆ ರಾತ್ರಿ-ಹಗಲು ಎರಡೂ ಮೇಳೆ ದೀಪವನ್ನು ಉರಿಸಬೇಕು. ಹಾಲು, ನೀರು ತುಂಬಿದ ಪಾತ್ರೆಯನ್ನು ಅಲ್ಲಿ ಇಡಬೇಕು.

2. ಮೃತರ ಅಸ್ಥಿ ಎಂದರೆ ಮೂಳೆಗಳನ್ನು ಸಂಗ್ರಹಿಸಿ ಯೋಗ್ಯ ಸ್ಥಳದಲ್ಲಿ ಸಂಚಯನ ಮಾಡುವುದು. ಅಸ್ಥಿಸಂಚಯನದ ಸೂಕ್ಷ್ಮ ವಿವರ ಈ ರೀತಿ ಇದೆ. ಎರಡನೇ ದಿನ ಇಲ್ಲವೇ ಮೂರನೇ ದಿನ ಮಾಡಬಹುದು. ಆ ದಿನ ಸ್ಮಶಾನಕ್ಕೆ ಹೋಗಿ ಸ್ನಾನ ಮಾಡಿ ಪವಿತ್ರ ಧರಿಸಿ ಸ್ಮಶಾನವಾಸಿಗಳಿಗೆ ಯಮಯತ್ವಾ ಎಂಬ ಮಂತ್ರದಿಂದ ಉದ್ದಿನ ಬಲಿ ನೀಡಬೇಕು. ಮೂರು ಬಾರಿ ಪ್ರದಕ್ಷಿಣೆ ನಂತರ ಮಂತ್ರ ಮೂಲಕ ಹಾಲು ಚಿಮುಕಿಸಿ, ನೆನೆದ ಬೂದಿಯಿಂದ ಅಸ್ಥಿಗಳನ್ನು ಸಂಗ್ರಹಿಸಿ ಮುತ್ತುಗದ ಎಲೆಗಳ ಮೇಲಿಟ್ಟು ಅದನ್ನು ಮಡಕೆಯಲ್ಲಿ ಇಟ್ಟುಕೊಳ್ಳಬೇಕು. ಶಾಸ್ತ್ರ ಪ್ರಕಾರ ಇಲ್ಲಿ ಶ್ರಾದ್ಧ ತ್ರಿಭುಜಾಕಾರ ಸ್ಥಂಡಿಲ ರಚನೆ. ಮೂರು ದಿಕ್ಕುಗಳಲ್ಲಿ ಮೂರು ಪಿಂಡಗಳನ್ನು ಕೊಡಬೇಕು. ಬಳಿಕ ಅನ್ನ ಮಾಡಿ ಮೊಸರು ಹಾಗೂ ತುಪ್ಪವನ್ನು ಹಾಕಿ ಪ್ರೇತಕ್ಕೆ ಅರ್ಪಿಸಬೇಕು. ಇದನ್ನೇ "ಮಧುರ ಬಲಿ" ಎನ್ನುವುದು. ಶವದಹನದಿಂದ ಉಂಟಾದ ಕಷ್ಟ ವೇದನೆಗಳ ನಿವಾರಣೆಗಾಗಿ ಈ ಅಸ್ಥಿಸಂಚಯನದ ಪಾತ್ರೆಯ ಮೇಲೆ ಪಿಂಡವೊಂದನ್ನು ಇಡಬೇಕು. ಈ ಶ್ರಾದ್ಧಕಾರ್ಯ ಮುಗಿದ ಮೇಲೆ ಗಂಗೆಯಲ್ಲಿ ಅಥವಾ ಸೂಕ್ತಸ್ಥಳದಲ್ಲಿ ಜಲಮಧ್ಯೆ ಅಸ್ಥಿಪಾತ್ರೆಯನ್ನು ಹಾಕಬೇಕು.

3. ದಶಗಾತ್ರವಿಧಿ: ಅಸ್ಥಿಸಂಚಯನದ ನಂತರ ಪಿತೃಋಣ ವಿಮೋಚನೆಗಾಗಿ ಪುತ್ರನು ದಶಗಾತ್ರವಿಧಿಯನ್ನು ಆಚರಿಸಬೇಕು. ಪುತ್ರನು ಹತ್ತು ದಿನಗಳ ಕಾಲವೂ ಮೃತನಿಗೆ ಪಿಂಡಪ್ರದಾನ ಮಾಡುವುದೇ ಇದರ ಗುರಿ. ಪವಿತ್ರವೆನ್ನಬಹುದಾದ ವೃಕ್ಷದ ಬುಡದಲ್ಲಿ ಪೀಠವನ್ನು ಮಾಡಿ ಹಸುವಿನ ಸಗಣಿಯಿಂದ ಸಾರಿಸಿ ಗಿಡದ ಎಲೆಗಳ ಮೇಲೆ ದರ್ಭೆಯ ವಿಪ್ರನನ್ನು ಸ್ಥಾಪನೆ ಮಾಡಿ. ಅವನನ್ನು ಅರ್ಘ್ಯ ಪಾದ್ಯಾದಿಗಳಿಂದ ಅರ್ಚಿಸಿ ನಮಸ್ಕರಿಸಬೇಕು. ಬಳಿಕ ದರ್ಭಾಸನದ ಮೇಲೆ ನಾಮಗೋತ್ರಗಳನ್ನು ಹೇಳುತ್ತಾ ಪಿಂಡವನ್ನಿಡಬೇಕು. ಪೂಜಾದಿಗಳ ನಂತರ ಹಾಲು ಮತ್ತು ನೀರಿನ ಪಾತ್ರೆಯಲ್ಲಿ ಕಾಗೆಗಳಿಗೆಂದು ಅನ್ನವನ್ನಿಡಬೇಕು. ಪ್ರೇತಶಬ್ದಗಳನ್ನು ಉಚ್ಚರಿಸುತ್ತಾ ಅರ್ಪಣೆ ಮಾಡಬೇಕು. ಇದಕ್ಕೆ "ವರ್ಧಮಾನಜಲಾಂ ಜಲಿ" ಎನ್ನುವರು. ಸಪಿಂಡನದ ಅವಧಿ ಯವರೆಗೂ ಪ್ರೇತ ಶಬ್ದದಿಂದಲೇ ಎಲ್ಲ ಕ್ರಿಯೆಗಳೂ ನಡೆಯುತ್ತದೆ.

ಹೀಗೆ ಕೊಡುವ ಪಿಂಡದಲ್ಲಿ ನಾಲ್ಕು ಭಾಗಗಳು ಆಗುತ್ತದೆ. ಇದರಲ್ಲಿ ಎರಡು ಭಾಗವು ಪಂಚಮಹಾಭೂತಗಳಿಗೆ. ಮೂರನೆಯ ಭಾಗವು ಯಮಕಿಂಕರರಿಗೆ, ಉಳಿದ ನಾಲ್ಕನೆಯ ಭಾಗ ಮೃತಪುರುಷನಿಗೆ ಲಭಿಸುತ್ತದೆ.

ಮೊದಲನೆಯ ದಿನ ಪಿಂಡ ಪ್ರಧಾನದಿಂದ ವಾಯುರೂಪದ ಪ್ರೇತಕ್ಕೆ ತಲೆ, ಎರಡನೆಯದಿನದ ಪಿಂಡಪ್ರದಾನದಿಂದ ಕುತ್ತಿಗೆ ಭುಜಗಳು, ಮೂರನೇ ದಿನದ ಪಿಂಡ ಪ್ರದಾನದಿಂದ ಹೃದಯ, ನಾಲ್ಕನೇ ದಿನ ಬೆನ್ನು, ಐದನೆಯದು ನಾಭಿ, ಆರನೆಯದು ಸೊಂಟ, ಗುಪ್ತಾಂಗಗಳು, ಏಳನೆಯ ದಿನ ತೊಡೆಗಳು, ಎಂಟನೆಯ ದಿನ ಮೊಣಕಾಲು ಮತ್ತು ಪಾದಗಳು, ಹತ್ತನೆಯ ದಿನ ಹಸಿವು, ಬಾಯಾರಿಕೆಗಳು ತಲೆದೋರಿ ಪ್ರೇತವು ಸಬಲವೂ, ಸಶಕ್ತವೂ ಆಗಿ, ಪಿಂಡ ಪ್ರದಾನಗಳಿಂದಾಗಿ ಹಸ್ತ ಗಾತ್ರದ ದೇಹವು ಪ್ರಾಪ್ತವಾಗುತ್ತದೆ. ಆಗ ಪ್ರೇತತ್ವ ಮರೆಯಾಗಿ ಜೀವನು ಶುಭಾಶುಭ ಕರ್ಮಫಲವನ್ನು ಅನುಭವಿಸಲು ಶಕ್ತನಾಗುತ್ತಾನೆ. ಇದು ದಶಗಾತ್ರ ವಿಧಿಯಿಂದ ಆಗುವ ಬದಲಾವಣೆ.

ಹನ್ನೊಂದು ಹನ್ನೆರಡನೆಯ ದಿನ ಜೀವವು ತಿನ್ನಲು ತೊಡಗುತ್ತಾನೆ. ಹದಿಮೂರನೆಯ ದಿನ ಯಮ ಮಾರ್ಗದಲ್ಲಿ ಓರ್ವನೇ ನಡೆದು ಹೋಗುತ್ತಾನೆ. ಹತ್ತು ದಿನಗಳಲ್ಲಿ ಬ್ರಾಹ್ಮಣನಿಗೆ ಭೋಜನ, ಮೃತನ ಆತ್ಮಕ್ಕೆ ಶಾಂತಿ, ಮುಕ್ತಿ ಕೊಡುವಂತೆ "ಅನಾದಿನಿಧನೋ ದೇವಃ ಶಂಖಚಕ್ರಗದಾಧರಃ। ಅಕ್ಷಯ ಪುಂಡರೀಕಾಕ್ಷ ಪ್ರೇತ ಮೋಕ್ಷ ಪ್ರದೋಭವ" ಎಂಬುದಾಗಿ ಪ್ರಾರ್ಥಿಸಿಕೊಳ್ಳಬೇಕು. ಹನ್ನೊಂದನೇ ದಿನದ ಕ್ರಿಯೆಗಳು: ವೃಷೋತ್ಸರ್ಗ, ದಾನಗಳು ಇತ್ಯಾದಿ: ಹನ್ನೊಂದನೆ ದಿನದ ಔರ್ಧ್ವದೈಹಿಕ ಕ್ರಿಯೆ ಬಹು ಮುಖ್ಯವಾದದ್ದು. ಪ್ರೇತಕ್ಕೆ ಮುಕ್ತಿ ದಯಪಾಲಿಸಲೆಂದು ಯಥಾವತ್ತಾಗಿ ತಿಳಿದ ಬ್ರಾಹ್ಮಣರನ್ನು ಕರೆಸಿ ಈ ಕಾರ್ಯವನ್ನು ಮಾಡಬೇಕು. ಪಶ್ಚಿಮ ದಿಕ್ಕಿನಲ್ಲಿ ವಿಷ್ಣುವಿನ ಕಲಶ ಹಾಗೂ ವಿಗ್ರಹ, ಪೂರ್ವದಿಕ್ಕಿನಲ್ಲಿ ಬ್ರಹ್ಮಕಲಶ, ಉತ್ತರ ದಿಕ್ಕಿನಲ್ಲಿ ರುದ್ರನ ಕಲಶ, ದಕ್ಷಿಣ ದಿಕ್ಕಿನಲ್ಲಿ ಯಮನ ಕಲಶ, ಮಧ್ಯದಲ್ಲಿ ಮಗನು ಕೌಶಿಕನನ್ನು ಸ್ಥಾಪಿಸಿ ವಿಷ್ಣು, ರುದ್ರ, ಬ್ರಹ್ಮ ಹಾಗೂ ಯಮ ಇವರುಗಳಿಗೆ ಮಂತ್ರಪುರಸ್ಸರ ದಕ್ಷಿಣಾಭಿಮುಖ ತರ್ಪಣವನ್ನು ನೀಡಬೇಕು. ಹೋಮ ಮಾಡಿ, ದಶಘಟ ಮೊದಲಾದ ಶ್ರಾದ್ಧಗಳನ್ನು ಮಾಡಬೇಕು.

ಮೃತನು ವೈತರಣಿ ನದಿಯನ್ನು ಸುಲಭವಾಗಿ ದಾಟಲು ಗೋದಾನ ಮಾಡಬೇಕು. ಮೃತನು ಬಳಸಿದ ಆಭರಣ, ವಾಹನ, ಬಟ್ಟೆ ತುಪ್ಪದ ಕಂಚಿನ ಪಾತ್ರೆ, ಸಪ್ತಧಾನ್ಯಗಳು, ಹಾಸಿಗೆ, ಛತ್ರಿ ಇತ್ಯಾದಿ ವಸ್ತುಗಳನ್ನು ಸತ್ಪಾತ್ರರಿಗೆ ದಾನ ಮಾಡುತ್ತಾ "ಮಹನೀಯನೇ! ಇದೇ ತೀರಿಕೊಂಡವನ ವಸ್ತುಗಳನ್ನು ಯಥಾಶಕ್ತಿಯಿಂದ ನಮ್ರತೆಯಿಂದ ನಿನಗೆ ಅರ್ಪಿಸುತ್ತಿದ್ದೇನೆ. ದಯಮಾಡಿ ಪ್ರೇತವು ಸದ್ಗತಿ ಹೊಂದುವಂತೆ ಮಾಡು" ಎಂದು ಪ್ರಾರ್ಥಿಸಬೇಕು.

**ವೃಷೋತ್ಸರ್ಗ:** ವೃಷೋತ್ಸರ್ಗವೆಂದರೆ ಮೃತನ ಮೋಕ್ಷಸಿದ್ಧಿಗಾಗಿ ಮಾಡುವ ವೃಷಭದ ದಾನ. ಇದಕ್ಕೆ ಗರುಡ ಪುರಾಣದಲ್ಲಿ ವಿಶೇಷ ಮಹತ್ವವನ್ನು ನೀಡಲಾಗಿದೆ. ಮುದಿಯಾಗದ ಲವಲವಿಕೆಯಿಂದ ಇರುವ ವೃಷಭದ ದಾನದಿಂದಾಗಿ ಇಪ್ಪತ್ತೊಂದು ಪೀಳಿಗೆಯವರು ರೌರವಾದಿ ನರಕಗಳಿಂದ ಬಿಡುಗಡೆ ಹೊಂದುವರೆಂದು ಹೇಳಿದೆ.

**ಷೋಡಶಶ್ರಾದ್ಧ ಸಪಿಂಡನ :** ಷೋಡಶತ್ರಯಗಳೆಂದು ಒಟ್ಟು ನಲವತ್ತೆಂಟು ಶ್ರಾದ್ಧಗಳನ್ನು ಹೇಳಿದೆ. ಷೋಡಶತ್ರಯಗಳು ಯಾವುವೆಂದರೆ ಮಲಿನ ಷೋಡಶಿ, ಷೋಡಶ ಮಧ್ಯಮ ಹಾಗೂ ನಿಯತಕಾಲಿಕ ಶ್ರಾದ್ಧಗಳು.

ಮಲಿನ ಷೋಡಶಿಗಳು ಯಾವುವೆಂದರೆ: 1. ಮೃತನು ಇದ್ದ ಎಂದರೆ ಮೃತನ ಸ್ಥಾನ, 2. ಮನೆಯಬಾಗಿಲು, 3. ಶವಯಾತ್ರೆಯಲ್ಲಿ ಮಾರ್ಗಮಧ್ಯೆ ಇಡುವ ಪಿಂಡ, 4. ಚಿತೆಯ ಮೇಲಿಡುವ ಪಿಂಡ, 5. ಶವದ ಎಡಬಲ ಹಸ್ತಗಳಲ್ಲಿಡುವ ಪಿಂಡ, 6. ಅಸ್ಥಿಸಂಚಯನ ಮಾಡುವಾಗ ಹಾಗೂ ದಶಗಾತ್ರವಿಧಿಯ ಹತ್ತು ದಿನಗಳ ಹತ್ತು ಪಿಂಡಗಳು ಸೇರಿ ಒಟ್ಟು ಹದಿನಾರು ಪಿಂಡಗಳು. ಇದಕ್ಕೆ "ಮಲಿನಷೋಡಶಿ" ಅಥವಾ "ಷೋಡಶ ಪ್ರಥಮ"ವೆಂದೂ ಕರೆಯುವರು. ಇವು ಹದಿನಾರು ಶ್ರಾದ್ಧಗಳು.

"ಷೋಡಶ ಮಧ್ಯಮ" ವೆನ್ನುವುದು ಹದಿನಾರು ಪಿಂಡಗಳು. 1. ವಿಷ್ಣು 2. ಶಿವ, 3. ಪರಿವಾರ ಸಮೇತನಾದ ಯಮಧರ್ಮರಾಜ, 4. ಸೋಮರಾಜ, 5. ಮತ್ತು 6. ಹವ್ಯವಾಹನನಾದ ಅಗ್ನಿ, 7. ಕಾಲಪುರುಷ, 8. ರುದ್ರ, 9. ಪುರುಷ, 10. ಪ್ರೇತ, 11. ಮಹಾವಿಷ್ಣು 12. ಬ್ರಹ, 13. ವಿಷ್ಣು ಹಾಗೂ 14. ಶಿವ, 15. ಯಮ ಹಾಗೂ 16. ಪುರುಷ - ಹೀಗೆ ಹದಿನಾರು ಪಿಂಡಗಳು ಷೋಡಶಮಧ್ಯಮ. ಇವು ಹದಿನಾರು.

ನಿಯತಕಾಲಿಕವೆಂದರೆ ಪ್ರತಿ ತಿಂಗಳಿನಂತೆ ಹನ್ನೆರಡು ತಿಂಗಳು, ಮಾಡುವ ಹನ್ನೆರಡು ಶ್ರಾದ್ಧ, ಪಾಕ್ಷಿಕ (ಹದಿನೈದು ದಿನಗಳಿಗೆ) ತ್ರಿಪಾಕ್ಷಿಕ (ನಲವತ್ತೈದು ದಿನಗಳು) ಊನಷಾಣ್ಮಾಸಿಕ (ಐದೂವರೆ ತಿಂಗಳು) ಊನಾಬ್ದಿಕ (ಹನ್ನೊಂದೂವರೆ ತಿಂಗಳು) ಇವು ನಾಲ್ಕು ಸೇರಿ ಹದಿನಾರು ಶ್ರಾದ್ಧಗಳು.

ಹೀಗೆ ಆಚರಿಸುವ ನಲವತ್ತೆಂಟು ಶ್ರಾದ್ಧಗಳು ಪ್ರೇತತ್ವನ್ನು ನಿರ್ಮೂಲನ ಮಾಡಿ ಮೃತನನ್ನು ಪಿತೃಗಳ ಸಾಲಿಗೆ ಸೇರಿಸುತ್ತದೆ. ಈ ಶ್ರಾದ್ಧಗಳನ್ನು ಮಾಡದಿದ್ದರೆ ಪ್ರೇತತ್ವ ಉಳಿದುಬಿಡುತ್ತದೆ.

**ಸಪಿಂಡನ ವಿಧಿ:** ಇದು ಸೂತಕಾಂತ್ಯದಲ್ಲಿ ಮಾಡುವ ಕ್ರಿಯೆ. ಹನ್ನೊಂದನೆಯ ದಿನದ ಕರ್ಮಗಳನ್ನು ನೆರವೇರಿಸಿದ ನಂತರ ಮಾಡಬೇಕಾದುದು. ಇದು ಪ್ರೇತತ್ವ ನಿವಾರಿಸಿ, ಮೃತನನ್ನು ಪಿತೃಸ್ಥಾನಕ್ಕೆ ಏರಿಸುವ ಕೆಲಸವಾಗಿರುತ್ತದೆ. ಈ ಕಾರ್ಯವನ್ನು ಮಾಡದೆ ಪುತ್ರನ ಸೂತಕವು ನಿವಾರಣೆ ಆಗುವುದಿಲ್ಲ. ಇದು ಪುರುಷ ಸತ್ತ ಹನ್ನೆರಡನೆಯ ದಿನ ಮಾಡುವಂತಹದು. ಆ ದಿನ ಪುತ್ರನು ಸ್ನಾನ ಮಾಡಿ ಶುಭನಾಗಿ ಮೃತನ ಸ್ಥಳವನ್ನು ಶುಚಿಗೊಳಿಸಿ, ಶಾಸ್ತ್ರೋಕ್ತವಾಗಿ ಸಪಿಂಡನ ಮಾಡಬೇಕು. ವಿಶ್ವೇದೇವರನ್ನು ಅರ್ಘ್ಯ ಪಾದ್ಯಾದಿಗಳಿಂದ ಪೂಜಿಸಬೇಕು. ಪಿತಾಮಹನೇ ಮೊದಲಾದವರಿಗೆ ಅವರು ವಸು,

ರುದ್ರ, ಆದಿತ್ಯರ ಸ್ವರೂಪವೆಂದು ಮೂರು ಪಿಂಡಗಳನ್ನು ಕ್ರಮವಾಗಿ ಕೊಡಬೇಕು. ನಂತರ ನಾಲ್ಕನೆಯ ಪಿಂಡವನ್ನು ಮೃತ ತಂದೆಗೆ ಕೊಡಬೇಕು. ಪ್ರೇತಪಿಂಡವನ್ನು ಕೋಲಿನಿಂದ ಮೂರು ಭಾಗ ಮಾಡಿ, ತಾತನೇ ಮೊದಲಾದವರು ಮೂರು ಪಿಂಡಗಳಿಗೆ ಭಾಗ ಮಾಡಿದ ಪಿಂಡಭಾಗಗಳನ್ನು ಪ್ರತ್ಯೇಕವಾಗಿ ಸೇರಿಸಬೇಕು. ಅಜ್ಜಿಯೊಡನೆ ತಾಯಿಯನ್ನೂ, ತಾತನೊಡನೆ ತಂದೆಯನ್ನು ಸಪಿಂಡೀಕರಣ ಮಾಡುವುದು. (ಇದರ ವಿವರಗಳು ಸಂಕೀರ್ಣ ರೀತಿಯಲ್ಲಿದೆ. ಈಗ ಇಷ್ಟು ತಿಳಿದುಕೊಂಡರೆ ಸಾಮಾನ್ಯರಿಗೆ ಸಾಕು).

ಸಪಿಂಡೀಕರಣದ ನಂತರ ಶಯ್ಯಾದಾನ ಎಂದರೆ ಹಾಸಿಗೆಯನ್ನು ದಾನಮಾಡುವುದು. ಲಕ್ಷ್ಮೀನಾರಾಯಣ ವಿಗ್ರಹಗಳನ್ನಿಟ್ಟು ಇತರ ಸಾಮಗ್ರಿಗಳ ಸಮೇತ ಸತ್ಪಾತ್ರರಿಗೆ ಶಯ್ಯಾದಾನ ಮಾಡಿದರೆ ಮಗನೂ, ಮೃತತಂದೆಯೂ ಅಧಿಕ ಪುಣ್ಯಭಾಜನರಾಗುವರೆಂದು ಹೇಳಿದೆ.

**ಹದಿಮೂರು ಪದಗಳ ದಾನ:** ದಾನ ಮಾಡುವ ವಸ್ತುಗಳಿಗೆ ''ಪದಗಳು'' ಎನ್ನುವರು. ಅಂತಹವು ಏಳು ಇವೆ: ಅವು ಯಾವುವೆಂದರೆ ಕೊಡೆ, ಪಾದರಕ್ಷೆ, ವಸ್ತ್ರ ಮುದ್ರಿಕೆ, ಕಮಂಡಲ, ಪೀಠ ಮತ್ತು ಪಂಚಪಾತ್ರೆ. ಈ ಏಳು ಪದಗಳ ಜತೆಗೆ ತಾಮ್ರಪಾತ್ರೆ, ಅಕ್ಕಿ, ಭೋಜನ, ಧನ ಹಾಗೂ ಯಜ್ಞೋಪವೀತ, ದಂಡ - ಇವುಗಳಿಂದ ಪದಗಳು ಪೂರ್ಣಗೊಳ್ಳುತ್ತವೆ. ಹನ್ನೆರಡನೆಯ ದಿನ ಹದಿಮೂರು ಪದಗಳನ್ನು ಹದಿಮೂರು ಮಂದಿ ಬ್ರಾಹ್ಮಣರಿಗೆ ದಾನ ಮಾಡಬೇಕು. ಯಮಮಾರ್ಗದಲ್ಲಿ ಹೋಗುವ ಮೃತನಿಗೆ ಈ ಪದದಾನದಿಂದ ಎಲ್ಲೆಲ್ಲೂ ತಂಪಾಗಿ ಸುಖ ಸಿಗುವುದು.

ತಂದೆ ತಾಯಿ ತೀರಿಕೊಂಡ ನಂತರ ಅಪರಕರ್ಮಗಳು, ಸಪಿಂಡನ, ವೃಷೋತ್ಸರ್ಗ, ಶಯ್ಯಾದಾನ ಇವುಗಳ ಜತೆಗೆ ಗರುಡಪುರಾಣವನ್ನು ಭಕ್ತಿಯಿಂದ ಕೇಳಿ ಸಾವಿನ ಭೀತಿಯನ್ನು ಕೈಬಿಡಬೇಕೆಂದು ಹೇಳಿರುತ್ತದೆ. ಪಾಪ ಪುಣ್ಯಗಳ ಬಗ್ಗೆ ವಿಷ್ಣುವು ಗರುಡನಿಗೆ ಹೇಳಿದ ವಿಚಾರಗಳೇ ಗರುಡ ಪುರಾಣ.

**ವಾರ್ಷಿಕ ಶ್ರಾದ್ಧ:** ಶ್ರಾದ್ಧವೆನ್ನುವುದು ಹಿಂದೂ ಧಾರ್ಮಿಕ ವಿಧಿಗಳಲ್ಲಿ ಅತ್ಯಂತ ಶ್ರೇಯಸ್ಕರವಾದ ಕರ್ಮವಾಗಿರುತ್ತದೆ. ಇದೊಂದು ಯಜ್ಞ, ಪಿತೃಯಜ್ಞ, ಪಿತೃಗಳನ್ನು ಆರಾಧಿಸುವುದರಿಂದ ಆಯಸ್ಸು ಆರೋಗ್ಯ, ಸಂಪತ್ತು ಧಾನ್ಯ, ಪಶು, ಪುತ್ರ, ಪೌತ್ರಾದಿ ಸಂಪತ್ತುಗಳನ್ನು ಪಡೆಯಬಹುದೆಂದು ಸ್ಮೃತಿಗಳು ಹೇಳುತ್ತವೆ. ದೇವಲಸ್ಮೃತಿ, ಯಮಸ್ಮೃತಿ, ಬೃಹಸ್ಮೃತಿ ವಚನಗಳಲ್ಲಿ ಪಿತೃಯಜ್ಞದ ಫಲಗಳನ್ನು ಹೇಳಿವೆ. ಪಿತೃಗಳಿಗೆ ನಿಗ್ರಹಾನುಗ್ರಹ ಶಕ್ತಿಯು ಅಪಾರವಾಗಿರುವುದರಿಂದ ಅವರನ್ನು ಸಂತೃಪ್ತರನ್ನಾಗಿ ಮಾಡಿ ಅವರಿಂದ ಅನುಗ್ರಹ ಪಡೆಯುವುದೇ ಶ್ರಾದ್ಧದ ಮುಖ್ಯ ಉದ್ದೇಶವಾಗಿರುತ್ತದೆ. ನಮ್ಮನ್ನು ಅಗಲಿದ, ನಮ್ಮ ಜನಕ್ಕೆ ಕಾರಣರಾದ, ನಮ್ಮನ್ನು ಹೆತ್ತು ಹೊತ್ತು ಸಾಕಿ ಸಲಹಿದ, ನಮ್ಮನ್ನು ಜವಾಬ್ದಾರಿಯುತ ನಾಗರೀಕರನ್ನಾಗಿ ಮಾಡಿದವರೇ ನಮ್ಮ ಹಿರಿಯರು. ಇವರನ್ನು ಸ್ಮರಿಸುತ್ತಾ ಅವರಿಗೆ ಪೂಜೆ ಸಲ್ಲಿಸುವುದೇ ಶ್ರಾದ್ಧ. ಆ ದಿನವೇ ಶ್ರಾದ್ಧದ ದಿನ. ಆದುದರಿಂದಲೇ ಶ್ರಾದ್ಧವನ್ನು ಆಚರಿಸುವ ಕರ್ತನು ಅಧಿಕಾರಿಯೂ ಮತ್ತು ಪ್ರಸಾದ ಭಾಗಿಗಳು ಆದವರು ಶ್ರಾದ್ಧದ ಬಗ್ಗೆ ತಿಳಿದುಕೊಂಡು ಆಚರಿಸುವುದು ಸರ್ವಶ್ರೇಷ್ಠ. (ಅದಕ್ಕಾಗಿ ಮಾರ್ಗದರ್ಶನಕ್ಕಾಗಿ ಕೆಲವು ವಿವರಗಳನ್ನು ಕೊಡಲಾಗಿದೆ).

ಹಿರಿಯರು ಪುಣ್ಯಲೋಕವನ್ನು, ಸದ್ಗತಿಯನ್ನು ಹೊಂದಲು, ಸಂಬಂಧಿಸಿದ ಅಧಿಕಾರಿಗಳಾದ ಪುತ್ರರೇ ಮೊದಲಾದವರು ನಡೆಸುವ ವಿಧಿಯೇ ಶ್ರಾದ್ಧ. ಪ್ರೇತವನ್ನಾಗಲೀ, ಪಿತೃಗಳನ್ನಾಗಲೀ ಉದ್ದೇಶಿಸಿ ಶ್ರದ್ಧಾಪೂರ್ವಕವಾಗಿ ಸತ್ಪಾತ್ರರಲ್ಲಿ ಮಾಡುವ ಶಾಸ್ತ್ರೀಯವಾದ ದಾನ ಅಥವಾ ಕೊಡುಗೆ ಎಂದೂ ಹೇಳಬಹುದು. ನಿಮಂತ್ರಕರಿಗೆ, ಬ್ರಾಹ್ಮಣರಿಗೆ ಏನನ್ನು ಶ್ರದ್ಧಾಭಕ್ತಿಗಳಿಂದ ಕೊಡುತ್ತೇವೆಯೋ ಅದು ಶ್ರಾದ್ಧ. ಶ್ರದ್ಧೆಯಿಲ್ಲದೆ ಕೇವಲ ಆಡಂಬರ, ಅಜ್ಞತೆಗಳಿಂದ ಶ್ರಾದ್ಧ ಕರ್ಮವು ನಿರರ್ಥಕವಾಗುತ್ತದೆ ಎಂಬುದನ್ನು ಗಮನಿಸಬೇಕು. ಪಿತೃಋಣವನ್ನು ತೀರಿಸಿ ಋಣಮುಕ್ತನಾಗುವುದು ಪುತ್ರನ ಆದ್ಯಕರ್ತವ್ಯಗಳಲ್ಲಿ ಒಂದು. ಅದಕ್ಕಾಗಿಯೇ ಅಂತ್ಯೇಷ್ಟಿ ಹಾಗೂ ವಾರ್ಷಿಕ ಶ್ರಾದ್ಧಗಳನ್ನು ಮಾಡುವುದು, ವರ್ಷದಲ್ಲಿ ಒಂದು ದಿನ ಹಿರಿಯರನ್ನು ಸ್ಮರಿಸಿ ಮನೆಯವರೆಲ್ಲರೂ ಶ್ರದ್ಧಾಭಕ್ತಿಗಳಿಂದ, ನೇಮದಿಂದ ನಡೆದುಕೊಂಡು ಅವರ ಅನುಗ್ರಹವನ್ನು ಪಡೆದುಕೊಳ್ಳುವುದು ಶ್ರೇಯಸ್ಕರ.

**ಶ್ರಾದ್ಧಗಳ ವೈವಿಧ್ಯಗಳು:** ಶ್ರಾದ್ಧಗಳಲ್ಲಿ ವಿವಿಧ ಭಾಗಗಳಿವೆ. 1. ಸಹೋದರ, ಸಹೋದರಿ, ಅತ್ತೆ, ಮಗ, ಹೆಂಡತಿ ಇವರನ್ನು ಉದ್ದೇಶಿಸಿ ಏಕೋದ್ದಿಷ್ಟ ಶ್ರಾದ್ಧವನ್ನು ಆಚರಿಸುವುದು. 2. ಪಾರ್ವಣ ಶ್ರಾದ್ಧವೆಂದರೆ ತಂದೆ, ತಂದೆಯ ತಂದೆ, ಮತ್ತು ಅಜ್ಜನ ತಂದೆ ಇವರನ್ನುದ್ದೇಶಿಸಿ ಮಾಡುವ ಶ್ರಾದ್ಧ. ಈ ಎರಡು ವಿಧದ ಶ್ರಾದ್ಧಗಳಲ್ಲಿಯೂ ನಿತ್ಯ, ನೈಮಿತ್ತಿಕ, ಕಾಮ್ಯಶ್ರಾದ್ಧವೆಂದು ಮೂರು ವಿಧಗಳಿವೆ. ನಿಯತಕಾಲ (ಅಮಾವಾಸ್ಯೆ ಇತ್ಯಾದಿ)ದಲ್ಲಿ ಮಾಡುವ ಶ್ರಾದ್ಧವು ''ನಿತ್ಯಶ್ರಾದ್ಧ.'' ನಿಮಿತ್ತ ಒದಗಿದಾಗ ಮಾಡುವುದು (ಗ್ರಹಣ ಇತ್ಯಾದಿ ಸಮಯ) ''ನೈಮಿತ್ತಿಕ ಶ್ರಾದ್ಧ.'' ಕಾಮನೆಯಿಂದ (ಯುಗಾದಿ, ಮನ್ವಾದಿ ಸಮಯಗಳು) ಮಾಡುವ ಶ್ರಾದ್ಧವೇ ''ಕಾಮ್ಯಶ್ರಾದ್ಧ.'' ಜಾತಕರ್ಮ, ವಿವಾಹಾದಿಗಳಲ್ಲಿ ಆಚರಿಸುವುದೇ ''ವೃದ್ಧಿಶ್ರಾದ್ಧ'' ಪ್ರತಿಯೊಂದು ಪರ್ವದಲ್ಲಿಯೂ ಬರುವ ಶ್ರಾದ್ಧವೇ '' ಪಾರ್ವಣ ಶ್ರಾದ್ಧ''ಗೋಷ್ಠಿಯಲ್ಲಿ ಮಾಡುವ ಶ್ರಾದ್ಧ ''**ಗೋಷ್ಠಿ ಶ್ರಾದ್ಧ**'' ಮಹಾತ್ಮರುಗಳು ಮನೆಗೆ ಬಂದಾಗ ಸುಖವನ್ನು ಪಡೆಯಲು ಬ್ರಾಹ್ಮಣ ಭೋಜನದೊಂದಿಗೆ ಮಾಡುವ ಶ್ರಾದ್ಧವು ''ಶುದ್ಧಿಶ್ರಾದ್ಧ.'' ವಿವಾಹ, ಪುಂಸವನ ಇತ್ಯಾದಿ ಸಂಸ್ಕಾರ ಕರ್ಮಗಳಲ್ಲಿ ಮಾಡುವುದನ್ನು ''ಕರ್ಮಾಂಗ ಶ್ರಾದ್ಧ'' ವೆಂದೂ ಕರೆಯುವರು. ದೇಶಾಂತರ ಪ್ರಯಾಣ ಬೆಳೆಸುವಾಗ ತುಪ್ಪದ ಮೂಲಕ ಮಾಡುವ ಶ್ರಾದ್ಧ ''ಯಾತ್ರಾ ಶ್ರಾದ್ಧ.'' ಕಾಶೀ, ಪ್ರಯಾಗ ಮೊದಲಾದ ತೀರ್ಥಕ್ಷೇತ್ರಗಳಲ್ಲಿ ಮಾಡುವ ಶ್ರಾದ್ಧವೇ ''ತೀರ್ಥಶ್ರಾದ್ಧ.'' ಬ್ರಾಹ್ಮಣರಿಗೆ ಶ್ರಾದ್ಧಸಾಮಗ್ರಿಗಳನ್ನು ಕೊಟ್ಟು ಮಾಡುವ ಶ್ರಾದ್ಧ ''ಆಮಶ್ರಾದ್ಧ'' (ಇಲ್ಲಿ ಭೋಜನ ವಿಧಿ ವಿನಃ ಉಳಿದುದೆಲ್ಲವನ್ನೂ ಮಾಡಬೇಕು). ಭೋಜನ ವೆಚ್ಚಕ್ಕಿಂತ ಹೆಚ್ಚು ದ್ರವ್ಯದಾನ ಮಾಡಿ ಮಾಡುವ ಶ್ರಾದ್ಧವೇ ''ಹಿರಣ್ಯ ಶ್ರಾದ್ಧ.'' ದ್ರವ್ಯ ಮತ್ತು ಬ್ರಾಹ್ಮಣರು ಇಲ್ಲದಾಗ ಅನ್ನ ಮಾಡಿ ಹೋಮದಲ್ಲಿ ಅರ್ಪಿಸುವುದೇ ''ಹೋಮಶ್ರಾದ್ಧ.'' ಸಂಕಲ್ಪ ಪೂರ್ವಕವಾಗಿ ಕೇವಲ ಪಿಂಡದಾನ ಮಾಡುವುದು ''ಪಿಂಡಶ್ರಾದ್ಧ'' (ಭೋಜನ ಇರುವುದಿಲ್ಲ), ಪಿಂಡದಾನದ ವಿನಹ ಉಳಿದ ವಿಧಿಗಳಿಂದ ಮಾಡುವುದು ''ಸಾಂಕಲ್ಪಿಕ ಶ್ರಾದ್ಧ'' (ಆವಾಹನ, ಸ್ವಧಾಶಬ್ದ, ಪಿಂಡ, ಪಾಣಿಹೋಮ, ವಿಕಿರ, ಅರ್ಘ್ಯಪ್ರದಾನಗಳಿರುವುದಿಲ್ಲ). ಬ್ರಾಹ್ಮಣರನ್ನು ಆಹ್ವಾನಿಸಿ ಆಸನ, ಗಂಧ, ಹೂವು, ಧೂಪ ಮತ್ತು ದೀಪಗಳೆಂಬ ಪಂಚೋಪಚಾರಗಳಿಂದ ಪೂಜಿಸಿ ಭೋಜನ ನೀಡುವುದು. ''ಬ್ರಹ್ಮಾರ್ಪಣ ಶ್ರಾದ್ಧ'' ವಿಶ್ವಾಮಿತ್ರ ಸ್ಮೃತಿಯಲ್ಲಿ ನಿತ್ಯ, ನೈಮಿತ್ತಿಕ, ಕಾಮ್ಯ, ವೃದ್ಧಿ, ಸಪಿಂಡೀಕರಣ, ಪಾರ್ವಣ, ಗೋಷ್ಠಿ, ಶುದ್ಧಿ, ಕರ್ಮಾಂಗ, ದೈವಿಕ, ಯಾತ್ರಾ, ಪುಷ್ಟಿ ಎಂಬುದಾಗಿ ಹನ್ನೆರಡು ಶ್ರಾದ್ಧಗಳನ್ನು ಹೇಳಿದೆ.

ಶ್ರಾದ್ಧದ ಉದ್ದೇಶ: ಶ್ರಾದ್ಧಕ್ಕೆ ಎರಡು ಮುಖ್ಯ ಉದ್ದೇಶಗಳಿವೆ. ಒಂದನೆಯದು ನಾವು ಯಾರನ್ನು ಕುರಿತು ಶ್ರಾದ್ಧವನ್ನು ಮಾಡುತ್ತೇವೆಯೋ ಅವರನ್ನು ಸಂತೃಪ್ತಿಗೊಳಿಸುವುದು. ಸದ್ಗತಿಯನ್ನು ಪಡೆವುದು. ಎರಡನೆಯದು, ಅಂತಹ ದಿನಗಳಲ್ಲಿ ಪಿತೃಗಳನ್ನು ಪೂಜಿಸಿ ಅವರ ಅನುಗ್ರಹವನ್ನು ಪಡೆಯುವುದು.

ಶ್ರಾದ್ಧ ದಿನಗಳಲ್ಲಿ ಪಾರ್ವಣ ಶ್ರಾದ್ಧವನ್ನು ಆಚರಿಸುವುದು ಬಹುಶ್ರೇಷ್ಠವಾದದ್ದು ಅದು ಅಸಾಧ್ಯವಾದರೆ ಸಂಕಲ್ಪಶ್ರಾದ್ಧ ಆಮಶ್ರಾದ್ಧ ತರ್ಪಣ ಶ್ರಾದ್ಧ ಬ್ರಾಹ್ಮಣ ಭೋಜನ ಇತ್ಯಾದಿ ಯಾವ ರೂಪದಲ್ಲಿಯಾದರೂ ಮಾಡಬಹುದು. ವಸು, ರುದ್ರ, ಆದಿತ್ಯರನ್ನೇ ಪಿತೃ, ಪಿತಾಮಹ, ಪ್ರಪಿತಾಮಹರೆಂದು ಭಾವಿಸಿ ಪೂಜಿಸಬೇಕು. ವಸುರುದ್ರಾದಿಗಳಿಗೆ ಬ್ರಹ್ಮನೇ ಮೊದಲಾದ ದೇವತೆಗಳು ಅಧಿಷ್ಠಾತೃ ದೇವತೆಗಳು. ಆದುದರಿಂದಲೇ ನಮ್ಮ ಮೂವರು ಹಿರಿಯರೂ ಸೃಷ್ಟಿ ಸ್ಥಿತಿ ಲಯಾದಿಗಳ ತ್ರಿಮೂರ್ತಿಗಳ ಕಾರ್ಯದ ಅಂಶರೂಪರೆಂದು ತಿಳಿಯಬೇಕು. ವಿವಾಹಾದಿ ಕಾರ್ಯಗಳಲ್ಲಿ ಪಿತೃಗಳು ನಾಂದೀಮುಖರು, ಅಲ್ಲಿ ದೇವತೆಗಳು ಪ್ರಧಾನರು. ಶ್ರಾದ್ಧಗಳಲ್ಲಿಯಾದರೋ ಪಿತೃಗಳೇ ಪ್ರಧಾನರು, ದೇವತೆಗಳು ಗೌಣರು.

ನಿಮಂತ್ರಣ: ಶ್ರಾದ್ಧಕ್ಕೆ ಜ್ಞಾನಿಗಳಾದವರು, ಸಚ್ಚಾರಿತ್ರ್ಯವಿರುವ ಸಜ್ಜನರನ್ನು ನಿಮಂತ್ರಿಸಬೇಕೆಂದು ಸ್ಮೃತಿಗಳು ಹೇಳಿವೆ. ಅವರ ರಾತ್ರಿಯ ಭೋಜನವಾಯಿತೇ ಎಂದು ತಿಳಿದು ಅಂತಹವರನ್ನು ನಿಮಂತ್ರಿಸಿ ಪ್ರಾರ್ಥಿಸಿಕೊಳ್ಳಬೇಕು. ಶ್ರಾದ್ಧದ ಸಮಯವನ್ನು ತಾವಾಗಿಯೇ ತಿಳಿದು ನಮ್ಮ ಪಿತೃದೇವತೆಗಳು ವಾಯುರೂಪದಿಂದ ನಿಮಂತ್ರಿತರಾದ ಬ್ರಾಹ್ಮಣರಲ್ಲಿ ಬಂದು ಸೇರಿಕೊಳ್ಳುವರು. ಶ್ರಾದ್ಧಕಾಲ ಬಂದಾಗ ಯಮಧರ್ಮರಾಯನು ಅಂತಹವರನ್ನು ಅವರವರ ಮನೆಗೆ ಕಳುಹಿಸುತ್ತಾನೆ. ಅವರು ತಮ್ಮ ಮಕ್ಕಳು ನೀಡುವ ಮಧು, ಪಾಯಸಾದಿಗಳನ್ನು ಭುಜಿಸಿ, ಮಕ್ಕಳು ಮರಿಗಳನ್ನು ಅವರ ಶ್ರದ್ಧೆಗೆ ಮೆಚ್ಚಿ ಅನುಗ್ರಹ, ಆಶೀರ್ವಾದ ಮಾಡಿ ಹಿಂದಿರುಗುವರು.

ಕರ್ತೃ ಮತ್ತು ಮೃತ ಮಾತಾಪಿತರ ನಡುವೆ ಬ್ರಾಹ್ಮಣರು ಮಧ್ಯಸ್ಥರು. ಪಿತರ ಮುಖವೇ ಬ್ರಾಹಣರಾಗಿ ಕಾಣಿಸಿಕೊಳ್ಳುವುದು. ಶ್ರಾದ್ಧಕ್ಕೆ ನಿಮಂತ್ರಿಸಲ್ಪಡುವ ಬ್ರಾಹ್ಮಣರು ಶಾಸ್ತ್ರಸಂಪನ್ನರೂ, ತತ್ವಜ್ಞರೂ, ಸದಾಚಾರ ಸಂಪನ್ನರೂ, ಜಿತೇಂದ್ರಿಯರೂ, ಅಗ್ನಿಹೋತ್ರವನ್ನು ಆಚರಿಸುವವರೂ, ಸ್ವಕರ್ಮನಿರತರೂ, ಸಜ್ಜನರೂ ಆಗಿರಬೇಕು ಎಂದು ಸ್ಮೃತಿಗಳಲ್ಲಿ ಹೇಳಿದೆ. (ಈಗಿನ ಕಾಲದಲ್ಲಿ ಇಂತಹವರು ಸಿಗುವುದು ಕಷ್ಟವೇ. ಆದರೆ ಸಜ್ಜನರೆಂದು ತಿಳಿದವರನ್ನು ನಿಮಂತ್ರಿಸಬಹುದು) ನಿಮಂತ್ರಿಸಿದ ಮೇಲೆ ಆತನ ಗುಣಾವಗುಣಗಳನ್ನು ಗಣಿಸಬಾರದು. ಶ್ರಾದ್ಧ ನಿಮಂತ್ರಿತನು ಬೇರೆ ಶ್ರಾದ್ಧಗಳ ನಿಮಂತ್ರಣಗಳನ್ನು ಒಪ್ಪಬಾರದು. ನಿಮಿತ್ತ ದಿನಗಳಲ್ಲಿ ಸ್ತ್ರೀ ಸಂಗ ಮಾಡಬಾರದು. ಆ ದಿನ ಬೇರೆ ದಾನ, ಪ್ರತಿಗ್ರಹ, ಶವಾನುಗಮನಾದಿಗಳನ್ನು ಮಾಡಬಾರದು. ಊಟ

ಮಾಡುವಾಗ ಲವಣಾದಿಗಳನ್ನು ಕೇಳಬಾರದು, ತುಪ್ಪ ಪಾಯಸ, ಜೇನು ತುಪ್ಪ ವಿನಃ ಉಳಿದ ವಸ್ತುಗಳನ್ನು ಸಶೇಷ ಎಂದರೆ ಉಳಿಸಿ ಊಟಮಾಡಬೇಕು. ನಿಮಂತ್ರಿತರು ಕರ್ತೃವಿನ ಗೋತ್ರದವರಾಗಿರಬಾರದು. ಐದು ತಿಂಗಳ ಗರ್ಭಿಣಿ ಪತಿ, ಜ್ಞಾತಿಗಳು, ಆಚಾರ ಹೀನರೂ, ಬ್ರಹ್ಮಚಾರಿಗಳೂ, ವಿಧುರರೂ, ಸುಲಭಕೋಪಿಗಳೂ ಆಗಿರಬಾರದು. ಆಪತ್ತಿಕನಾದರೂ ಪುತ್ರವಂತನಾಗಿದ್ದಲ್ಲಿ ನಿಮಂತ್ರಿಸಬಹುದು. ಗೌತಮ ಸೂತ್ರದಲ್ಲಿ ನಿಮಂತ್ರಿತರ ಸಂಖ್ಯೆ ಒಂಬತ್ತನ್ನು ಮೀರಬಾರದೆಂದಿದೆ. ಯೋಗಿಯು ದೊರೆತರೆ ಸಹಸ್ರ ಬ್ರಾಹಣನು ದೊರೆತಂತೆ, ನಿಮಂತ್ರಕರು ಶ್ರಾದ್ಧ ವೇಳೆಗೆ ತಡವಾಗಿ ಬರಬಾರದು.

ಪಾರ್ವಣಶ್ರಾದ್ಧದಲ್ಲಿ ವಿಶ್ವೇದೇವಸ್ಥಾನಕ್ಕೆ ಇಬ್ಬರನ್ನು, ಪಿತೃಸ್ಥಾನಕ್ಕೆ ಮೂವರು, ವಿಷ್ಣುಸ್ಥಾನಕ್ಕೆ ಒಬ್ಬರು - ಹೀಗೆ ಆರು ಜನರನ್ನು ನಿಮಂತ್ರಿಸಬೇಕು. ಇದು ಆಗದಿದ್ದರೆ ಒಂದೊಂದು ಸ್ಥಾನಕ್ಕೆ ಒಬ್ಬರನ್ನಾದರೂ ನಿಮಂತ್ರಿಸಬೇಕು. ಶ್ರಾದ್ಧವನ್ನು ವಿಸ್ತರಿಸಬಾರದು. ಎಂದರೆ ಬಹು ಜನರನ್ನು ಕರೆಯಬಾರದು. ಏಕೆಂದರೆ ಮಡಿ, ಶ್ರದ್ಧೆ ಇವುಗಳನ್ನು ಪಾಲಿಸಲು ಕಷ್ಟವಾಗುತ್ತದೆ. ಹೆಚ್ಚು ಊಟಮಾಡುವವರನ್ನು ನಿಮಂತ್ರಿಸಬೇಕು. ಇಷ್ಟೇ ದಕ್ಷಿಣೆ ಕೊಡಬೇಕೆಂದು ಕೇಳುವವರನ್ನು ನಿಮಂತ್ರಿಸಬಾರದು. ಶ್ರಾದ್ಧಕ್ಕೆ ಕೇವಲ ಇಬ್ಬರೇ ದೊರೆತರೆ ವಿಷ್ಣುಸ್ಥಾನದಲ್ಲಿ ದರ್ಭೆಯನ್ನಿಟ್ಟು ಅದರಲ್ಲಿ ಮಾನಸಿಕ ಪೂಜೆ ಮಾಡಬಹುದು. ಒಬ್ಬ ಬ್ರಾಹ್ಮಣನೂ ಸಿಗದಿದ್ದರೆ ಅನ್ನವನ್ನು ಪಾಕಮಾಡಿ ಅಗ್ನಿಯಲ್ಲಿ ಪಿತೃಗಳನ್ನು ಆವಾಹಿಸಿ ಪಿತೃಸೂಕ್ತದಿಂದ ಅನ್ನವನ್ನು ಹೋಮ ಮಾಡುವುದರಿಂದ ಆರಾಧಿಸಬೇಕು. ಇದನ್ನು ''**ಚಟಕ ಶ್ರಾದ್ಧ**'' ಎನ್ನುವರು. ಪಾರ್ವಣ ಶ್ರಾದ್ಧವನ್ನು ಮಾಡಲಾಗದವರು ''ಸಂಕಲ್ಪ ಶ್ರಾದ್ಧ''ವನ್ನಾದರೂ ಮಾಡಬೇಕು. ಅದೂ ಆಗದಿದ್ದರೆ ''ಆಮಶ್ರಾದ್ಧ'' (ಪಕ್ವವಾಗದ ಪದಾರ್ಥಗಳನ್ನು ಕೊಡುವುದು) ಮಾಡಬಹುದು. ಅದೂ ಸಾಧ್ಯವಾಗದಿದ್ದರೆ ಹಿರಣ್ಯದಾನ, ತಿಲತರ್ಪಣ ಮಾಡಬಹುದು. ಒಟ್ಟಾರೆ ಶ್ರಾದ್ಧವನ್ನು ನಿಲ್ಲಿಸಲೇಬಾರದು. ಆಚರಿಸಬೇಕು. ಶ್ರದ್ಧೆ ಭಕ್ತಿಯೇ ಮುಖ್ಯ ಎಂಬುದನ್ನು ಗಮನಿಸಬೇಕು.

ಸೋದರರ ಕರ್ತವ್ಯ: ಅಣ್ಣತಮಂದಿರುಗಳಿದ್ದರೆ ಹಿರಿಯವನೇ ಶ್ರಾದ್ಧಕ್ಕೆ ಅಧಿಕಾರಿಯು. ಅವನೇ ಉತ್ತಮನು. ಉಳಿದವರು ಧನದಾನ್ಯಾದಿಗಳನ್ನು ಸಮರ್ಪಿಸುವುದು, ಕಾಯಕ ಸೇವೆ ಮಾಡುವುದು ಶ್ರೇಷ್ಠವಾದುದು. ಯಾವುದೇ ಕೆಲಸವಾಗಲಿ ಅದನ್ನು ಶ್ರದ್ಧೆಯಿಂದ ಕೀಳೆನ್ನದೆ ಮಾಡಬೇಕು. ಶ್ರಮ, ವೆಚ್ಚಗಳನ್ನು ಒಬ್ಬರ ಮೇಲೆಯೇ ಬಿಡಬಾರದು. ಇಲ್ಲಿ ಒಬ್ಬರು ಅನುಕೂಲಸ್ಥರಾಗಿರುತ್ತಾರೆ ಎಂಬ ಭಾವನೆ ಸಲ್ಲದು. ಏನೇ ಆಗಲಿ, ಯಥಾಶಕ್ತಿ ಹಂಚಿಕೊಂಡೇ ಮಾಡಬೇಕು. ಬಹಳ ಬಡವರಾಗಿದ್ದರೂ ಖಿನ್ನಪಡದೆ ಸಹೋದರರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಸಂತೆ :ಷದಿಂದಲೂ, ಶ್ರದ್ಧೆಯಿಂದಲೂ ಕೆಲಸಮಾಡಬೇಕು. ಕರ್ತರುಗಳೆಲ್ಲರೂ ನಮ್ರರಾಗಿ, ಶ್ರದ್ಧಾಭಕ್ತಿಗಳಿಂದ ಕೂಡಿ ಮಾಡಿದರೆ ಹಿರಿಯರಿಗೆ ಆನಂದವು ಇಮಡಿಯಾಗುತ್ತದೆ.

ಅಧಿಕಾರಿಗಳು ಯಾರು?: ಶ್ರಾದ್ಧ ಮಾಡುವುದಕ್ಕೆ ಸ್ವಂತಮಕ್ಕಳು, ದತ್ತಕ, ಮಗಳ ಮಗ, ಸಾಕುಮಗ ಮುಂತಾದ ಗೌಣ ಪುತ್ರರು, ಸಹೋದರರ ಪುತ್ರರು, ಸಹೋದರರು, ಜ್ಞಾತಿಗಳು ಅಥವಾ ಅನುಬಂಧಿಗಳು, ಯಾರೂ ಸಿಗದಿದ್ದರೆ ಪುರೋಹಿತರೇ ಅಧಿ ಕಾರಿಗಳಾಗಿರುತ್ತಾರೆ. ಶ್ರಾದ್ಧದ ಮುಖ್ಯತಮ ಭಾಗಗಳ ಪರಿಚಯವಿದ್ದವನು ಪುರೋಹಿತರಿಲ್ಲದೆ ಶ್ರಾದ್ಧವನ್ನು ಮಾಡಿಕೊಳ್ಳಬಹುದು. ಎಲ್ಲಾ ಯಜ್ಞಗಳಿಗೂ ನಿಜವಾದ ಪುರೋಹಿತನೆಂದರೆ ಅಗ್ನಿಯೇ. ವೇದವಿದನಾದ ಬ್ರಾಹಣರು ಅಗ್ನಿ ಸ್ವರೂಪನೇ ಆಗಿರುವದರಿಂದ ಆತನೇ ಪುರೋಹಿತನೂ ಕೂಡ.

ಸುಮಂಗಲೀ ಶ್ರಾದ್ಧದಲ್ಲಿ ಸುವಾಸಿನಿಯೊಬ್ಬಳನ್ನು ನಿಮಂತ್ರಿಸಿ ಬ್ರಾಹ್ಮಣರ ಪಂಕ್ತಿಯಲ್ಲಿ ಕೂರಿಸಿ ಪೂಜಿಸಬೇಕೆಂಬುದು ಸ್ಮೃತಿ ವಚನವಿದೆ. ಇಲ್ಲದಿದ್ದರೆ ಶ್ರಾದ್ಧ ಮುಗಿದ ಮೇಲೆ ಸುವಾಸಿನಿಯನ್ನು ಕರೆದು ಹೂವು ಹಣ್ಣು ಅರಿಶಿನ, ಕುಂಕುಮಾದಿಗಳಿಂದ ಪೂಜಿಸಿ ಅವರ ಆಶೀರ್ವಾದ ಪಡೆಯಬೇಕು. ಯಾವುದೇ ಕಾರಣಗಳಿಂದ ಆಗದವರು ಹತ್ತಿರದ ಜ್ಞಾತಿಗಳಿಂದ, ಬ್ರಾಹ್ಮಣರಿಂದ ಶ್ರಾದ್ಧವನ್ನು ಮಾಡಿಸಬಹುದು.

ಕರ್ತೃ, ಭೋಕ್ತೃಗಳ ಕರ್ತವ್ಯಗಳು: ಕರ್ತೃ ಭೋಕ್ತೃಗಳು ಇಬ್ಬರೂ ಶುಭ್ರ ವಸ್ತ್ರಗಳನ್ನು ಧರಿಸಬೇಕು. ಆರ್ದ್ರವಸ್ತ್ರ ಕಾಷಾಯ ವಸ್ತ್ರ ಕೌಪೀನ, ಕೆಂಪುಬಟ್ಟೆ ಸುಟ್ಟಬಟ್ಟೆ ಹೊಲಿದ ಬಟ್ಟೆಗಳನ್ನು ಧರಿಸಬಾರದು. ಇಬ್ಬರೂ ಶ್ರಾದ್ಧದ ದಿನ ಪುನರ್ಭೋಜನವನ್ನು ಮಾಡಬಾರದು. ಸ್ತ್ರೀಯರು ಮನೆಯನ್ನು ಗುಡಿಸಿ, ಸಾರಿಸಿ, ತಲೆಗೆ ಸ್ನಾನ ಮಾಡಿ, ಧೌತ ವಸ್ತ್ರವನ್ನು ಧರಿಸಿ, ಅಡಿಗೆ ಪಾತ್ರೆಗಳನ್ನೆಲ್ಲಾ ಶುದ್ಧೀಕರಿಸಿ, ಬಳಿಕ ಶುದ್ಧವಾಗಿ ಶ್ರಾದ್ಧನಿಮಿತ್ತ ಅಡುಗೆಗಳನ್ನು ಪ್ರೀತಿಯಿಂದ ಮಾಡಬೇಕು. ಶ್ರಾದ್ಧವನ್ನು ನಿರ್ವಹಿಸುವವರೆಲ್ಲರೂ ಬೆಳಗಿನಿಂದ ಆಹಾರ ಸ್ವೀಕಥಿಸದೆ ಉಪವಾಸದಿಂದಿರಬೇಕು. ಕರ್ತೃವು ಕಚ್ಚೆ ಪಂಚೆ ಉಡಬೇಕು. ಒದ್ದೆ ಬಟ್ಟೆಯನ್ನು ಉಡಬಾರದು.

ಶ್ರಾದ್ಧಕರ್ಮ ಪರಿಕರಗಳು: ಶ್ರಾದ್ಧಕ್ಕೆ ಬಳಸುವ ಪ್ರತಿಯೊಂದು ವಸ್ತುವು ಉತ್ಕೃಷ್ಟವಾಗಿರಬೇಕು. ಸಾತ್ವಿಕವಾದ ಪದಾರ್ಥಗಳಾಗಿರಬೇಕು. ಶ್ರಾದ್ಧದಲ್ಲಿ ಪವಿತ್ರವೆನಿಸುವ ವಸ್ತುಗಳು ಇವು: 1. ಕರುಕುಡಿದ ಮೇಲೆ ಕರೆದ ಹಾಲು, 2. ಗಂಗೆ, 3. ಜೇನುತುಪ್ಪ 4. ರೇಷ್ಮೆ ಬಟ್ಟೆ 5. ಮಗಳ ಮಗ, 6. ಕುತುಪ್ ಕಾಲ, 7. ಕರೀಎಳ್ಳು, ಗೋಧಿ, ಉದ್ದು, ಹೆಸರು, ಬೇಳೆ, ತೈಲ ಪಕ್ವ ಭಕ್ಷ್ಯಗಳು, ಇರಬೇಕು. ಕುಂಬಳಕಾಯಿ, ಎಮ್ಮೆಹಾಲು, ತೊಗರಿ, ಬಿಳಿಸಾಸಿವೆ, ಕಡಲೆ ಬೇಳೆ, ಜವಳಿಕಾಯಿ, ಇವು ಕೂಡದು. ಕುತುಪ್ ಕಾಲವನ್ನು ಲೆಕ್ಕ ಹಾಕಿದರೆ ಮಧ್ಯಾಹ್ನ 12.30 ಆಗುತ್ತದೆ. ಈ ಕಾಲದಲ್ಲಿ ಶ್ರಾದ್ಧಾರಂಭ ಒಳಿತು. (ಸ್ಕಾಂದ)

ಶ್ರಾದ್ಧಾಚರಣೆಗೆ ಸ್ವಗೃಹ ಶ್ರೇಷ್ಠ ಪುಣ್ಯಕೇತ್ರಗಳಾದರೆ ಬೇರೆಯವರ ಮನೆಗಳಾದರೂ ದೋಷವಿಲ್ಲ. ಅನಿವಾರ್ಯವಾಗಿ ಬೇರೆಯವರ ಮನೆಯಲ್ಲಿ ಶ್ರಾದ್ಧ ಮಾಡಬೇಕಾದ ಪರಿಸ್ಥಿತಿ ಬಂದರೆ ನೆಲಬಾಡಿಗೆ ಎಂಬುದಾಗಿ ದ್ರವ್ಯವನ್ನು ಕೊಡಬೇಕು. ಪತ್ನಿ ರಜಸ್ವಲೆಯಾದರೂ ಶ್ರಾದ್ಧದಲ್ಲಿ ಅನರ್ಹತೆ ಬರುವುದಿಲ್ಲ. ಶ್ರಾದ್ಧ ಕರ್ಮವನ್ನು ಒಮ್ಮೆ ಪ್ರಾರಂಭಿಸಿರೆ ಅಶೌಚವು ಬಂದರೂ ಶ್ರಾದ್ಧವನ್ನು ಮುಗಿಸಬಹುದು. ಅಶೌಚದೋಷ ಬರುವುದಿಲ್ಲ.

ಶ್ರಾದ್ಧದಲ್ಲಿ ಕ್ರಮಗಳು: ಒಬ್ಬನೇ ಕರ್ತೃ ಎರಡು ಬೇರೆ ಬೇರೆ ಶ್ರಾದ್ಧಗಳನ್ನು ಒಂದೇ ದಿನ ಮಾಡಬೇಕಾಗಿ ಬಂದರೆ ಒಂದು ಮುಗಿದ ಮೇಲೆ ಸ್ನಾನವಾಡಿ ಬೇರೆ ಬ್ರಾಹ್ಮಣರಿಗೆ ನಿಮಂತ್ರಣ ಹೇಳಿ, ಬೇರೆ ಬೇರೆ ಪಾಕಮಾಡಿ ಶ್ರಾದ್ಧವನ್ನು ಮಾಡಬೇಕು. ಪಿತೃಯಜ್ಞದ ದಿನಗಳಲ್ಲಿ ಮನೆಯಲ್ಲಿ ರಂಗವಲ್ಲಿಗಳನ್ನು ಇಡಬಾರದು. ಶ್ರಾದ್ಧ ಮುಗಿದ ನಂತರವೇ ಇಡಬೇಕು. ಗಂಡಸರು ವಿಭೂತಿಧಾರಣೆ ಮಾಡಬಾರದು. ಸ್ತ್ರೀಯರು ಪುಷ್ಪಾಲಂಕಾರ, ಕುಂಕುಮ ಧರಿಸಬಾರದು. ಜಗಳ, ಅಳುವುದು, ರೇಗುವುದು, ಕೆಟ್ಟ ಮಾತುಗಳನ್ನಾಡುವುದು ಪಿತೃಗಳಿಗೆ ಇಷ್ಟವಾಗುವುದಿಲ್ಲ. ಅವುಗಳನ್ನು ವರ್ಜಿಸಬೇಕು. ಶ್ರಾದ್ಧದ ದಿನ ಭಿಕ್ಷೆ ಹಾಕಬಾರದು. ಹಾಗೆ ಹಾಕಿದರೆ ಪಿತೃಗಳಿಗೆ ಅದರ ಶೇಷವನ್ನು ಬಳಸಿದಂತಾಗುವುದು. ಶ್ರಾದ್ಧದ ದಿನ ದಾನ - ಅಧ್ಯಯನ - ದೇವತಾರ್ಚನೆ - ವ್ರತ - ಹೋಮ - ವಿಶೇಷ ಜಪ ಮುಂತಾದವುಗಳನ್ನೂ ಮಾಡಬಾರದೆಂದು ಮನುವು ಹೇಳಿದ್ದಾನೆ. ಶ್ರಾದ್ಧಾನ್ನವನ್ನು ಮಿತ್ರಭೋಜನಕ್ಕೂ ಉಪಯೋಗಿಸಬಾರದು.

ವಿಶ್ವೇದೇವ ಮತ್ತು ಪಿತೃಗಳ ಅರ್ಚನೆಯಲ್ಲಿ ಅರ್ಘ್ಯ ಪಾತ್ರೆಗಳಿಗೆ ವಿಶೇಷ ಮಹತ್ವ ನೀಡಿದೆ. ಆ ಪಾತ್ರೆಗಳಲ್ಲಿ ಅವರು ಇರುತ್ತಾರೆಂದು ನಂಬಿಕೆ. ಸ್ವಸ್ತಿವಾಚನ, ಅಕ್ಷಯ್ಯೋದಕಗಳಾದ ನಂತರ ಆ ಪಾತ್ರೆಗಳನ್ನು ಸ್ಥಾನದ ವಿಪ್ರರಿಗೆ ಕೊಡಬೇಕು.

ವಾಯಸಪಿಂಡ: ತನ್ನ ವಂಶದಲ್ಲಿ ಹುಟ್ಟಿದವರಲ್ಲಿ ಯಾರಿಗಾದರೂ ದಹನಕಾರ್ಯ ವಾಗಿರಲಿ, ಬಿಡಲಿ ಅಂತಹವರು ತಾನು ಸಮರ್ಪಿಸುವ ಪಿಂಡದಿಂದ ಪರಮಗತಿಯನ್ನು ಹೊಂದಿರಲಿ ಎಂಬುದಾಗಿ ಅನ್ನದ ಪಿಂಡವನ್ನು ಹೊರಗೆ ಒಯ್ದು ಕಾಗೆಗಳಿಗೆ ಇಟ್ಟು ಬರುತ್ತಾರೆ. ಇದಕ್ಕೆ ''ವಾಯಸ ಪಿಂಡ'' ಎಂದು ಹೆಸರು. ''**ಕಾಕಪಿಂಡ**''ವೆಂತಲೂ ಕರೆಯುವರು. ಪಿತೃಗಳಿಗೆ ಸಮರ್ಪಿಸುವ ಷಟ್ಪಿಂಡ ಅಥವಾ ತ್ರಿಪಿಂಡಗಳಲ್ಲಿ ಮಧ್ಯದ ಪಿಂಡವನ್ನು ಬಿಟ್ಟು ಉಳಿದೆರಡು ಪಿಂಡಗಳನ್ನು ವಿಶೇಷವಾದ ಕಾಮನೆಗಳಿದ್ದರೆ ಕಾಗೆಗಳಿಗೆ ಸಮರ್ಪಿಸುವುದೂ ಬಳಕೆಯಲ್ಲಿದೆ. ಇವುಗಳನ್ನು ನೀರಿನಲ್ಲಿ ವಿಸರ್ಜಿಸುವುದು ಉಂಟು. ಪಿತೃದೇವತೆಗಳನ್ನು ತೃಪ್ತಿಪಡಿಸಲು ಕಾಗೆಯು ಬಹಳ ಶ್ರೇಷ್ಠವಾದ ಮಾಧ್ಯಮವೆಂದು ಹೇಳಿದ್ದಾರೆ. ಯಮಧರ್ಮ ರಾಯನು ವಾಯಸಕ್ಕೆ ಈ ರೀತಿ ವರವನ್ನು ಕೊಟ್ಟನೆಂದು ರಾಮಾಯಣದ ಉತ್ತರಕಾಂಡದಲ್ಲಿ ಹೇಳಿದೆ.

ಬಡಿಸುವುದರಲ್ಲಿ ನೇಮಗಳು: ಪಿಂಡವನ್ನು ಕಟ್ಟಿದ ಮೇಲೆ ಅದು ಒಡೆಯಬಾರದು. ಸರ್ವಥಾ ಹಾಗಾಗದಂತೆ ಗಮನ ಇಡಬೇಕು. ಪಿಂಡಪ್ರದಾನಕ್ಕೆ ಹಾಕುವ ದರ್ಭೆಗಳು ತುಂಡಿಲ್ಲದವಾಗಿರಬೇಕು. ಶ್ರಾದ್ಧ ಕರ್ತೃವು ಶ್ರಾದ್ಧ ಶೇಷವನ್ನು ಭುಂಜಿಸಬೇಕು. ಶ್ರಾದ್ಧಶೇಷಾನ್ನವನ್ನು ಜ್ಞಾತಿಗಳು, ಸಗೋತ್ರದವರು, ಶಿಷ್ಯರು, ಬಂಧುಗಳೂ ಭುಂಜಿಸಬಹುದು. ಬ್ರಾಹಣರಿಗೆ ಊಟಕ್ಕೆ ಬಡಿಸಲು ಮುತ್ತುಗದ ಎಲೆ ಶ್ರೇಷ್ಠ ಬಾಳೆ ಎಲೆ, ಹಲಸು, ಮಾವು, ನೇರಳೆ, ಸಂಪಿಗೆ, ಪುನ್ನಾಗ - ಇವುಗಳ ಎಲೆಗಳು ಮಧ್ಯಮ. ಬಾಳೆ ಎಲೆ ಹಸ್ತಪ್ರಮಾಣ ಎಂದರೆ 24 ಅಂಗುಲ - ಒಂದು ಮೊಳವಿರಬೇಕು. ವಿಪ್ರರ ಎಡಕ್ಕೆ ಅಗ್ರವು ಬರುವಂತೆ ಎರಡೆರಡು ಬಾಳೆ ಎಲೆಯನ್ನು ಹಾಸಬೇಕು. ವಿಪ್ರರಿಗೆ ಹೆಚ್ಚಾಗಿಯೇ, ಬಲವಂತವಾಗಿ ಬಡಿಸಬೇಕು. ಪ್ರತ್ಯೇಕವಾಗಿ ಲವಣವನ್ನು ಬಡಿಸಬಾರದು. ಸಾರು, ತೊವ್ವೆ, ಗೊಜ್ಜು ಪನ್ಯ ಇತ್ಯಾದಿ ವ್ಯಂಜನಗಳನ್ನು ಕೈನಿಂದ ಬಡಿಸಬಾರದು. ಬೇಯಿಸದಿರುವ ಹಣ್ಣುಗಳು, ಭಕ್ಷ್ಯಗಳನ್ನು ಕೈನಿಂದ ಬಡಿಸಬೇಕು. ಬೆಳ್ಳಿಯ ಪಾತ್ರೆಯಲ್ಲಿ ಊಟವನ್ನು ಬಡಿಸಿದರೆ ಪಿತೃಗಳಿಗೆ ಸಂತೋಷ ಎನ್ನುತ್ತಾರೆ. ಬಡಿಸುವಾಗ ಬಹಳ

ಜಾಗರೂಕತೆಯಿಂದ ಇರಬೇಕು. ಮುಸುರೆ ಮಾಡುವುದು, ಚೆಲ್ಲುತ್ತಾ ಬಡಿಸುವುದು, ಅವಸರ ಮಾಡುವುದು, ಜೋರಾಗಿ ಮಾತನಾಡುವುದು ಇಂತಹದನ್ನು ಮಾಡಬಾರದು. ಬಹಳ ಶಾಂತವಾಗಿ, ತಾಳ್ಮೆ - ನಗು ಮುಖದಿಂದ, ಶ್ರದ್ಧೆ ಪ್ರೀತಿ ಪ್ರೇಮಗಳನ್ನು ತೋರಿಸುತ್ತಾ ಬಡಿಸಬೇಕು. ಏಕೆಂದರೆ ಭುಂಜಿಸುತ್ತಿರುವವರು ನಮ್ಮನ್ನು ಅನುಗ್ರಹಿಸಲು ಬಂದಿರುವ ಪಿತೃದೇವತೆಗಳೇ ಎಂಬುದು ನೆನಪಿರಬೇಕು.

ಪರೇಹನಿ ಶ್ರಾದ್ಧ: ಪರೇಹನಿ ಎಂದರೆ ಶ್ರಾದ್ಧದ ಮಾರನೆಯ ದಿನ ಕೊಡುವ ತರ್ಪಣ. ಮರುದಿನ ಪ್ರಾತಃಕಾಲ ಪಿತ್ರಾದಿಗಳಿಗೆ (ಮಾತಾದಿ) ಮಾತ್ರ ತಿಲತರ್ಪಣ ಕೊಡಬೇಕು. ಈ ಜಲವು ಅಮೃತಮಯವಾದದ್ದು. ಸಮಯಾಭಾವವಿದ್ದರೆ ಶ್ರಾದ್ಧದ ದಿನವೇ ಆಚರಿಸಬಹುದು (ತೀರ್ಥಶ್ರಾದ್ಧ - ಗಯಾಶ್ರಾದ್ಧಗಳಲ್ಲಿ ಇದು ಇರುವುದಿಲ್ಲ) ಪರೇಹನಿ ಶ್ರಾದ್ಧ ತರ್ಪಣ ಕೊಡದಿದ್ದರೆ ಕರ್ಮ ಸಾಂಗವಾಗುವುದಿಲ್ಲ. ಪಿತೃಗಳು ಶಾಪವನ್ನು ಕೊಡುತ್ತಾರೆ.

ಪಾಣಿಹೋಮದಿಂದ ದೇವತೆಗಳೂ, ಪಿಂಡಪ್ರದಾನದಿಂದ ಯಮನ ವಶದಲ್ಲಿರುವವರೂ, ಪಿತೃಭೋಜನದಿಂದ ಸ್ವರ್ಗವಾಸಿಗಳೂ, ವಿಕಿರದಿಂದ ನಾರಕಿಗಳೂ, ತರ್ಪಣದಿಂದ ತಿರ್ಯಕ್ ರೂಪದಲ್ಲಿರುವವರೂ, ಭೂರಿ ಭೋಜನದಿಂದ ರಾಕ್ಷಸಯೋನಿಗಳಲ್ಲಿರುವವರೂ, ದಕ್ಷಿಣಾದಿಗಳಿಂದ ಋಷಿ ರೂಪದಲ್ಲಿರುವವರೂ ತೃಪ್ತರಾಗುವರು. ದಕ್ಷಿಣೆ ಕೊಡದೆ ಮಾಡುವ ಶ್ರಾದ್ಧವು ವ್ಯರ್ಥವಾದದ್ದು.

ಶ್ರಾದ್ಧದಲ್ಲಿ ಬರುವ ಪಾರಿಭಾಷಿಕ ಶಬ್ದಗಳು: ಸವ್ಯ - ಜನಿವಾರವನ್ನು ಎಡಹೆಗಲ ಮೇಲಿನಿಂದ ಬಲಗೈ ಕೆಳಗೆ ಇರುವಂತೆ ಹಾಕಿಕೊಳ್ಳುವುದು. (ಉಪವೀತಿ ಎಂದರೂ ಇದೇನೇ) ವಿಶ್ವೇದೇವಾರ್ಚನೆ, ವಿಷ್ಣು ಆರ್ಚನಾದಿಗಳಲ್ಲಿ ಸವ್ಯದಿಂದಿರಬೇಕು. ನಿವೀತಿ: ಯಜ್ಞೋಪವೀತವು ಎಡ ಹೆಗಲ ಮೇಲಿದ್ದು ಮಾಲಾಕಾರವಾಗಿರುವಂತೆ ಹಾಕಿಕೊಳ್ಳುವುದು. ಪ್ರಾಚೀನಾವೀತಿ: ಜನಿವಾರವು ಬಲಹೆಗಲ ಮೇಲಿದ್ದು ಎಡಗೈ ಕೆಳಗೆ ಇರುವಂತೆ ಹಾಕಿಕೊಳ್ಳುವುದು. (ಅಪಸವ್ಯ ಎಂದರೂ ಇದೇನೇ) ಪಿತ್ರಾರ್ಚನೆಗೆ ಅಪಸವ್ಯವೆಂದು ಉಕ್ತವಾಗಿದೆ. ಆದರೆ ಪಿತೃಸ್ಥಾನದಲ್ಲಿರುವವರಿಗೆ ಸ್ವಾಗತ, ಸ್ವಸ್ತಿವಾಚನ, ದಕ್ಷಿಣೆ ಕೊಡುವುದು. ಪ್ರದಕ್ಷಿಣೆ ಮಾಡುವುದು, ಗೋತ್ರಾಭಿವಾದನೆ, ಅರ್ಘ್ಯ ಕೊಡುವ ಆರು ಸಂದರ್ಭಗಳಲ್ಲಿ ಮಾತ್ರ ಕರ್ತೃನಿಗೆ ಸವ್ಯವೇ ಉಕ್ತವಾಗಿರುತ್ತದೆ. ಕ್ಷಣ = ಒಪ್ಪಿಗೆ ಎಂದು ಅರ್ಥ. ಕ್ಷಣಕಾಲ ತಾವು ಆ ಸ್ಥಾನದಲ್ಲಿ ಕುಳಿತುಕೊಳ್ಳಿ ಎಂದು ಕೇಳಿಕೊಳ್ಳುವುದು. ಕುಶ = ದರ್ಭೆ, ಯವ = ತೊಳೆದ ಅಕ್ಕಿಕಾಳು, ತಿಲ = ತೊಳೆದ ಕರಿ ಎಳ್ಳು, ಶಕಲ = ಎರಡು ಉದ್ದವಾದ ದರ್ಭೆಗಳು, ಯೂಥಿಕಾ = ಮುಳ್ಳು ಸೇವಂತಿಗೆ, ಪ್ರಾಗುದಕ್ = ಪೂರ್ವ ಉತ್ತರ ನಡುವಿನ ಈಶಾನ್ಯ ದಿಕ್ಕು ದೇವತೀರ್ಥ = ಬಲಗೈ ಎಲ್ಲಾ ಬೆರಳುಗಳ ಬುಡದಿಂದ ನೀರು ಬಿಡುವುದು, ಋಷಿತೀರ್ಥ = ಬಲಗೈ ಬಗ್ಗಿಸಿ ಕಿರುಬೆರಳಿನ ಬುಡದಿಂದ ನೀರನ್ನು ಬಿಡುವುದು. ದರ್ಭಪತ್ರ = ಪುಡಿ ಮಾಡಿದ ದರ್ಭೆ ಅಷ್ಟಾರ್ಘ್ಯ ದ್ರವ್ಯಗಳು = ನೀರು, ಹಾಲು, ದರ್ಭಾಗ್ರ, ಗಂಧ, ದಧಿ, ನೆನೆಸಿದ ಅಕ್ಕಿ, ತುಪ್ಪ ಮತ್ತು ಜೇನು. ಬರ್ಹಿಸ್ಸು = ಅಗ್ರಸಹಿತವಾದ ಮುಷ್ಟಿಮಾತ್ರ ದರ್ಭೆಗಳ ಕಂತೆ, ಸ್ಥಂಡಿಲ = ವೇದಿಕೆ, ಮೇಕ್ಷಣ = ತುಂಡು ದರ್ಭೆ, ವರಣ = ಆರಿಸುವುದು, ತೂಷ್ಣೀ = ಏಳು ದರ್ಭೆಗಳಿಂದ ಕಟ್ಟಿದ ಕೂರ್ಚ. ಬ್ರಹ್ಮದಂಡ = ಕರ್ಮಾಚರಣೆ ಅರ್ಹತೆ ಪಡೆಯಲು ಯಥಾಶಕ್ತಿ ಕಾಣಿಕೆಯನ್ನು ವಿಪ್ರರಿಗೆ ನೀಡಲು ನಿರ್ಧರಿಸಿಕೊಳ್ಳುವಿಕೆ.

ಶ್ರಾದ್ಧಕ್ಕೆ ಕರ್ತೃ ಮಾಡಿಕೊಳ್ಳಬೇಕಾದ ಸಿದ್ಧತೆಗಳು: ಶ್ರಾದ್ಧಾಚರಣೆಗಾಗಿ ಕರ್ತೃ ಮಾಡಿಕೊಳ್ಳಬೇಕಾದ ಸಿದ್ಧತೆಗಳನ್ನು ಇಲ್ಲಿ ಕೊಡಲಾಗಿದೆ; ಅಗ್ರದ ಬಾಳೆ ಎಲೆಗಳು, ದೊನ್ನೆಗಳು, ತೊಳೆದ ಅಕ್ಕಿ, ಕರಿಎಳ್ಳು, ತುಳಸಿ, ಬಿಡಿ ಹೂ, ತೇದ ಗಂಧ, ಮಣೆ, ಅರ್ಘ್ಯಪಾತ್ರೆ, ಪಂಚಪಾತ್ರೆ - ಉದ್ಧರಣೆ, ತಾಮ್ರದ ದೊಡ್ಡ ಚೆಂಬು, ತಾಮ್ರದ ಉದ್ಧರಣೆ, ದೊಡ್ಡ ಪಾತ್ರೆಯಲ್ಲಿ ತುಂಬಾ ನೀರು, ಕಲಶಕ್ಕೆ - ಬ್ರಹದಂಡಕ್ಕೆ - ಬ್ರಾಹಣರಿಗೆ - ಧಾರೆ ಎರೆಯುವುದಕ್ಕೆ, ನಾಣ್ಯಗಳು, ಉದ್ದವಾದ ದರ್ಭೆಗಳ ಕಂತೆ, ತುಂಡು ದರ್ಭೆಗಳ ಕಂತೆ, ಚೂರು ದರ್ಭೆಗಳು, ಏಳು ದರ್ಭೆಗಳಿಂದ ಕಟ್ಟಿದ ಕೂರ್ಚ, ಮೂರು ದರ್ಭೆಗಳಿಂದ ಕಟ್ಟಿದ ಪವಿತ್ರ, ಗಂಧದ ಕಡ್ಡಿ ಕರ್ಪೂರ, ಆರತಿತಟ್ಟೆ (ಸುವಾಸಿನಿಯರು ಮೃತರಾಗಿದ್ದಲ್ಲಿ) ವಿಳ್ಳೆದೆಲೆ, ಅಡಿಕೆ, ಜೇನುತುಪ್ಪ ಬಾಳೆಹಣ್ಣು ತುಪ್ಪ ಮೊಸರು, ಭೃಂಗರಾಜಪತ್ರ, ಕಲಶಪಾತ್ರ, ಹರಿವಾಣ ಪಂಚಪಾತ್ರಗಳು, ಅನುಕೂಲವಿದ್ದಲ್ಲಿ ಕೊಗಲು, ಪಿಂಡಕ್ಕೆ ಹೊದಿಸಲು ವಸ್ತ್ರಗಳು, ಯಜ್ಞೋಪವೀತಗಳು.

---

PAPU!